# "ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳು; ಉಡುಪಿ ತಾಲೂಕಿನ ಒಂದು ಅಧ್ಯಯನ".

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಎಂ.ಫಿಲ್ ಪದವಿಗಾಗಿ
(ಅಭಿವೃದ್ಧಿ ಅಧ್ಯಯನ ಸಾದರಪಡಿಸಿದ ಸಪ್ರಬಂಧ)



Kannada University Logo


ಸಂಶೋಧನಾ ವಿದ್ಯಾರ್ಥಿ:
**ಶ್ರೀ ನವೀನಕುಮಾರ ಎಂ.**
ನೋಂದಣಿ ಸಂಖ್ಯೆ: KTSMDS – 00625

ಸಂಶೋಧನಾ ಮಾರ್ಗದರ್ಶಕರು:
**ಡಾ। ವೈ. ರವೀಂದ್ರನಾಥ ರಾವ್**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಸಮಾಜ ಶಾಸ್ತ್ರ ವಿಭಾಗ,
ಎಸ್.ಎಂ.ಎಸ್. ಪದವಿ ಕಾಲೇಜು, ಬ್ರಹ್ಮಾವರ – 576 213, ಉಡುಪಿ ಜಿಲ್ಲೆ.





**... ತಿಯೋಲಾಜಿಕಲ್ ಸಂಶೋಧನಾ ಕೇಂದ್ರ**
**... ತ, ಮಂಗಳೂರು – 575 001**
**ಜುಲೈ, 2013**

# “ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳು; ಉಡುಪಿ ತಾಲೂಕಿನ ಒಂದು ಅಧ್ಯಯನ”.

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಎಂ.ಫಿಲ್ ಪದವಿಗಾಗಿ

(ಅಭಿವೃದ್ಧಿ ಅಧ್ಯಯನ ಸಾದರಪಡಿಸಿದ ಸಪ್ರಬಂಧ)



Kannada University Logo

ಸಂಶೋಧನಾ ವಿದ್ಯಾರ್ಥಿ:

**ಶ್ರೀ ನವೀನಕುಮಾರ ಎಂ.**

ನೋಂದಣಿ ಸಂಖ್ಯೆ: KTSMDS – 00625

ಮಾರ್ಗದರ್ಶಕರು:

**ಡಾ। ವೈ.ರವೀಂದ್ರನಾಥರಾವ್**

ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಸಮಾಜ ಶಾಸ್ತ್ರ ವಿಭಾಗ,

ಎಸ್.ಎಂ.ಎಸ್. ಪದವಿ ಕಾಲೇಜು, ಬ್ರಹ್ಮಾವರ–576 213, ಉಡುಪಿ ಜಿಲ್ಲೆ.

**ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ**

ಬಲ್ಮಠ, ಮಂಗಳೂರು – 575 001

ಜುಲೈ, 2013

# ಯೋಗ್ಯತಾ ಪತ್ರ

ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **"ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳು; ಉಡುಪಿ ತಾಲೂಕಿನ ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಸಪ್ರಬಂಧವನ್ನು **ಶ್ರೀ ನವೀನಕುಮಾರ ಎಂ.**ಇವರು **ಎಂ.ಫಿಲ್** ಪದವಿ ಪ್ರಾಪ್ತಿಗಾಗಿ ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ, ಸಂಶೋಧನೆಯ ಫಲಸ್ವರೂಪವಾಗಿದೆ. ಇವರ ಸಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಕ್ಕಾಗಿ ಬಳಸಿಕೊಂಡಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

**ದಿನಾಂಕ : 15-07-2013**

**ಡಾ। ವೈ ರವೀಂದ್ರನಾಥ್‌ರಾವ್**

**ಸ್ಥಳ : ಮಂಗಳೂರು**

ಸಂಶೋಧನಾ ಮಾರ್ಗದರ್ಶಕರು

Dr. Y. Ravindranath Rao
M.A., Ph.D.,
Prof & Head Dept. of Sociology
St. Mary's Syrian College
BRAHMAVAR - 576 213 (D. K.)

# <u>ಪ್ರಮಾಣ ಪತ್ರ</u>

ಹಂಪಿ ಕನ್ನಡ ವಿಶ್ವವಿದ್ಯಾಲಯದ **ಎಂ.ಫಿಲ್** ಪದವಿಗಾಗಿ ಸಾದರ ಪಡಿಸಿದ **"ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳು; ಉಡುಪಿ ತಾಲೂಕಿನ ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ಸಪ್ರಬಂಧ ನನ್ನ ಸ್ವಂತ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲದಾಯಕವಾಗಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ, ಬಲ್ಮಠ, ಮಂಗಳೂರು ಇಲ್ಲಿ ಸಂಶೋಧನಾ ಮಾರ್ಗದರ್ಶಕರಾದ **ಡಾ। ವೈ. ರವೀಂದ್ರನಾಥರಾವ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಪ್ರಬಂಧವನ್ನು ಬೇರೆ ಯಾವುದೇ ಪದವಿ/ಡಿಪ್ಲೊಮಾ/ತತ್ಸಮಾನ ಉಪಾಧಿಗಳ ವ್ಯಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಬಳಸಿಕೊಂಡಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

**ದಿನಾಂಕ : 15-07-2013** — ನವೀನ ಕುಮಾರ್ ಎಂ.

**ಸ್ಥಳ : ಮಂಗಳೂರು** — ಸಂಶೋಧನಾ ವಿದ್ಯಾರ್ಥಿ

# ಪರಿವಿಡಿ

# ಕೋಷ್ಟಕದ ಪಟ್ಟಿ

# ರೇಖಾಚಿತ್ರಗಳ ಪಟ್ಟಿ

# ಉಡುಪಿ ಜಿಲ್ಲೆಯ ನಕಾಶೆಯ ಪಟ್ಟಿ

# ಅಧ್ಯಾಯ – ೧

# ಪೀಠಿಕೆ

ಮದ್ಯಪಾನವು ಒಂದು ಸಾರ್ವತ್ರಿಕ ಸಾಮಾಜಿಕ ಸಮಸ್ಯೆಯಾಗಿದೆ. ಮದ್ಯವ್ಯಸನ ಎಂಬ ಕಾಯಿಲೆಯು ಜಗತ್ತಿನ ಎಲ್ಲಾ ದೇಶಗಳಲ್ಲೂ ಭೀಕರವಾಗಿ ಕಾಡುವ ಸಮಸ್ಯೆಯಾಗಿದೆ. ಮದ್ಯವ್ಯಸನದಿಂದ ಉಂಟಾಗುವ ಸಾಮಾಜಿಕ, ಆರ್ಥಿಕ, ದೈಹಿಕ, ಮಾನಸಿಕ ಪರಿಣಾಮಗಳಿಂದ ವ್ಯಸನಿಗಳನ್ನೇ ನಂಬಿರುವ ಕುಟುಂಬಗಳು ಸಂಕಷ್ಟದಲ್ಲಿ ಬೀಳುತ್ತವೆ. ಗಾಂಧೀಜಿಯವರ ನುಡಿಯಂತೆ "ಬೆಂಕಿ ದೇಹವನ್ನು ಸುಟ್ಟರೆ, ಮದ್ಯಪಾನ ದೇಹ ಮತ್ತು ಆತ್ಮಗಳೆರಡನ್ನೂ ಸುಡುತ್ತದೆ". ಇದರಿಂದಾಗಿ ವ್ಯಕ್ತಿಯು ಸರ್ವನಾಶವಾಗುತ್ತಾನೆ. ಮದ್ಯವ್ಯಸನದಿಂದಾಗಿ ವ್ಯಕ್ತಿ ಕುಟುಂಬದ ಅವನತಿಯಾಗುತ್ತದೆ. ಇದು ದೇಶದ ಅಭಿವೃದ್ಧಿಗೆ ಮಾರಕವಾಗಿದೆ.

ಯಾವುದೇ ಮನುಷ್ಯ ಜನ್ಮತಃ ದುಷ್ಟನಾಗಿರುವುದಿಲ್ಲ. ಹಾಗೆಯೇ ತೇಜಸ್ವಿಯೂ ಆಗಿರುವುದಿಲ್ಲ. ಸಮಾಜದ ವ್ಯವಸ್ಥೆಯೊಳಗೆ ಬೆಳೆಯುತ್ತಿದ್ದಂತೆ, ಬೆರೆಯುತ್ತಿದ್ದಂತೆ ವ್ಯಕ್ತಿತ್ವ ರೂಪಿತವಾಗುತ್ತದೆ. ಜೀವಿತದಲ್ಲಿ ಮುನ್ನಡೆಯುವಾಗ ಸಹವಾಸ ದೋಷದಿಂದ, ಒತ್ತಡಗಳಿಂದ, ಖುಷಿ–ಬೇಸರವಾದಾಗ, ತಪ್ಪು ಗ್ರಹಿಕೆಗಳಿಂದ ಮದ್ಯಪಾನದ ಬಳಕೆ ಮಾಡುತ್ತಾರೆ. ಕ್ರಮೇಣ ಇದು ಅಭ್ಯಾಸವಾಗಿ ಕೊನೆಗೆ ರೋಗವಾಗಿ ಪರಿಣಮಿಸುತ್ತದೆ. ಭಾರತವು ಪ್ರಪಂಚದ ಮೂರನೆಯ ಅತೀ ದೊಡ್ಡ ಮದ್ಯ ಮಾರಾಟ ಮಾಡುವ ದೇಶವಾಗಿದೆ. ಭಾರತದ ಜನಸಂಖ್ಯೆಯ 21.01% ಪ್ರಜೆಗಳು ಮದ್ಯ ಸೇವಿಸುತ್ತಾರೆ ಮತ್ತು 6.25 ಕೋಟಿ ಮದ್ಯವ್ಯಸನಿಗಳಿದ್ದಾರೆ. ಅಪಘಾತಗಳಲ್ಲಿ 55% ಘಟನೆಗಳು ಕುಡಿದ ಅಮಲಿನ ಸಮಯದಲ್ಲಿ ನಡೆಯುತ್ತದೆ. ಹೆಚ್ಚಾಗಿ ಕುಡಿತ ಆರಂಭವಾಗುವ ವಯಸ್ಸು 14 ರಿಂದ 23.ಈ ನಿಟ್ಟಿನಲ್ಲಿ ಮದ್ಯವ್ಯಸನ ವಿಮುಕ್ತಿಯ ಪ್ರಕ್ರಿಯೆಯಲ್ಲಿ ವೈದ್ಯಕೀಯ ಸಾಮಾಜಿಕ ಚಿಕಿತ್ಸೆ, ಸಮುದಾಯ ಶಿಬಿರಗಳು ಅನಾಮಿಕ ಅಮಲಿಗಳ ಪ್ರಯತ್ನ ಮತ್ತು ಧಾರ್ಮಿಕ ನಂಬಿಕೆಗಳು ಇತ್ಯಾದಿಗಳ ಮೂಲಕ ಮದ್ಯವ್ಯಸನಕ್ಕೆ ಚಿಕಿತ್ಸೆ ನೀಡಬಹುದು. ವಿಶ್ವ ಆರೋಗ್ಯ ಸಂಸ್ಥೆಯವರದಿಯಂತೆ ವ್ಯಸನಗಳಿಗೆ ನೀಡುವ ಚಿಕಿತ್ಸೆಯಿಂದ ಶೇಕಡಾ ೩೦ರಷ್ಟು ಜನರು ಮಾತ್ರ ವ್ಯಸನ

ಮುಕ್ತರಾಗುತ್ತಾರೆ. ಆದಾಗ್ಯೂ ಇವರು ವ್ಯಸನ ಮುಕ್ತರಾಗಿ ಉಳಿಯಬೇಕಿದ್ದಲ್ಲಿ ಕೌಟುಂಬಿಕ ಮತ್ತು ಸಮುದಾಯದ ಸಹಕಾರ ಅಗತ್ಯವಾಗಿದೆ. ಆದುದರಿಂದ ಯಾವುದೇ ವ್ಯಸನ ಚಿಕಿತ್ಸೆಯಲ್ಲಿ ಸಮುದಾಯ ಮತ್ತು ಕುಟುಂಬವನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕಾಗುತ್ತದೆ.

ಮೋಜು ಮರ್ಜಿಗಾಗಿ, ಪಾಶ್ಚಾತ್ಯ ಸಂಸ್ಕೃತಿಯಂತೆ ಶೋಕಿಗಾಗಿ, ಸಂಪ್ರದಾಯ, ಕಾಮೋತ್ತೇಜಕ, ಹಣಕಾಸು ಸಮಸ್ಯೆ, ಖಿನ್ನತೆ, ಪ್ರಚೋದನೆಗಾಗಿ, ನೋವು ನಿವಾರಕವಾಗಿ, ಸೃಜನಶೀಲತೆ ಹೆಚ್ಚಿಸಲು, ಮಾನಸಿಕ ಸಂತೋಷಕ್ಕಾಗಿ, ಹವಾಮಾನದ ವೈಪರೀತ್ಯ, ನಿರಾಶೆ, ದುಃಖ, ನೋವು, ಅವಮಾನಗಳಿಂದ ದೂರವಿರಲು, ಪ್ರತಿಭಟನೆ ತೋಡಿಸಲು ಕುತೂಹಲ, ಒತ್ತಡ ನಿವಾರಣೆ, ಒಂಟಿತನ ಸಮಸ್ಯೆ, ಸಂತೋಷ ಕೂಟ ಸಮಾರಂಭಗಳು ಇತ್ಯಾದಿ ಅಂಶಗಳು ಮದ್ಯಪಾನಕ್ಕೆ ಪ್ರಮುಖ ಕಾರಣವಾಗಿದೆ.ಗ್ರಾಮೀಣ ಪರಿಸರದಲ್ಲಿ ದುಡಿಯುವ ವರ್ಗಗಳಲ್ಲಿ ಮದಿರೆಯ ಅಭ್ಯಾಸ ಸರ್ವೇ ಸಾಮಾನ್ಯ. ಅದರಲ್ಲಿಯೂ ಕರಾವಳಿ ಜಿಲ್ಲೆಗಳಲ್ಲಿ ದೈವಗಳನ್ನು ಪೂಜಿಸುವ ವರ್ಗಗಳಲ್ಲಿ ಕೆಲವರು ಈ ದೈವಗಳಿಗೆ ಮದ್ಯವನ್ನು ಅರ್ಪಿಸಿ ಮತ್ತದನ್ನು ಸೇವಿಸುವುದು ಧಾರ್ಮಿಕ ಕ್ರಿಯೆಗಳ ಭಾಗವೂ ಆಗಿದೆ. ಹೀಗಾಗಿ ಮದ್ಯಪಾನ ನೈತಿಕವಾಗಿ ತಪ್ಪು ಎನ್ನುವ ಭಾವನೆ ಇಲ್ಲ.

ಶ್ರಮಜೀವಿಗಳ ಮನೆಗಳಲ್ಲಿ ತಮ್ಮ ಹಿರಿಯರು ಮದ್ಯಪಾನ ಮಡುವುದನ್ನು ನೋಡುತ್ತಾ ಮತ್ತು ಅದರ ಪರಿಣಾಮವನ್ನು ಎದುರಿಸುತ್ತಲೇ ಮಕ್ಕಳು ಬೆಳೆಯುತ್ತಾರೆ. ಹೀಗಾಗಿ ಬೆಳೆಯುತ್ತಿದ್ದಂತೆ ಈ ದುರಭ್ಯಾಸವನ್ನು ರೂಢಿಸಿಕೊಳ್ಳಲು ಅವರನ್ನು ತಡೆಯುವವರು ಯಾರೂ ಇರುವುದಿಲ್ಲ.ಬಹಳ ಹಿಂದೆ – ಸರಿಸುಮಾರು ಮೂವತ್ತು ವರ್ಷಗಳ ಹಿಂದೆ ನಮ್ಮ ಪರಿಸರದಲ್ಲಿದ್ದ ಅಮಲುಕಾರಿ ಪಾನೀಯ ಶೇಂದಿ ಆಗಿತ್ತು. ಶೇಂದಿ ನೈಸರ್ಗಿಕ ಪೇಯ. ಈಚಲ ಮರದಿಂದ ಭಟ್ಟಿ ಇಳಿಸಿದ್ದು, ಇದರಲ್ಲಿ ಮತ್ತು ಬರಿಸುವ, ಮನವನ್ನು ವಿಕೃತಗೊಳಿಸುವ ಈಥೈನ್ ಆಲ್ಕೋಹಾಲಿನ ಪ್ರಮಾಣ ಬಹಳ ಕಡಿಮೆ. ಶೇಕಡಾ ೮ಕ್ಕಿಂತ ಕಡಿಮೆ. ಅಲ್ಲದೇ ಈ ಪಾನೀಯದಲ್ಲಿ ಜೀವಸತ್ವಗಳು ಹೇರಳವಾಗಿದೆ. ಹಬ್ಬ ಹರಿದಿನಗಳಲ್ಲಿ, ದೈವದೇವತೆಗಳ ಪೂಜೆಗಳಲ್ಲಿ ಶೇಂದಿಯನ್ನು ಉಪಯೋಗಿಸಿದರೂ ಅದರಿಂದ ಆಗುವ ದುಷ್ಪರಿಣಾಮಗಳು ಕಡಿಮೆ, ಪ್ರಯೋಜನಗಳೇ ಹೆಚ್ಚು. ಹೀಗಾಗಿ ಕೋಲಗಳಲ್ಲಿ ಭೂತಗಳಿಗೆ ಇದನ್ನು ಅರ್ಪಿಸಿದರೆ ಒಂದು ಅರ್ಥವಾದರೂ ಇತ್ತು. ಬಹುಶಃ ಹೆಚ್ಚಿನ ಸಂತೋಷವನ್ನು ಹಂಚಿಕೊಳ್ಳಲು

ಶೇಂದಿಸೇವನೆ ಒಂದು ಮಾಧ್ಯಮವಾಗಿತ್ತು. ಶೇಂದಿ ಸೇವನೆಯಿಂದ ಆರೋಗ್ಯ ಹಾಳು ಮಾಡಿಕೊಂಡವರು ಬಹಳ ಕಡಿಮೆ. ಮನೆ ಹಾಳಾದ ಉದಾಹರಣೆಗಳಲ್ಲ. ಎಂದ ಮಾತ್ರಕ್ಕೆ ಶೇಂದಿ ಸೇವನೆ ಮಾಡುವುದು ಸರಿ ಎಂದಲ್ಲ. ಅಮಲು ಸೇವನೆ ಎಂದಿದ್ದರೂ ಅದು ಮಾರಿಯೇ ಆಗಿದೆ.

**ಮಿಥೈನ್ ಆಲ್ಕೋಹಾಲ್ ಭಯಾನಕ ವಿಷವಾಗಿದೆ. ಶರೀರದಲ್ಲಿರುವ ಕೆಂಪು ರಕ್ತಕಣಗಳಲ್ಲಿ ಸೇರಿ, ಆಮ್ಲಜನಕ ಸಾಗಾಟಕ್ಕೆ ತಡೆಯೊಡ್ಡಿ ಉಸಿರುಕಟ್ಟಿಸಿ ಕೊಲ್ಲುವ ಪ್ರಬಲ ರಾಸಾಯನಿಕ ವಸ್ತುವಾಗಿದೆ. ಕಳ್ಳಭಟ್ಟಿ ದುರಂತಗಳಲ್ಲಿನ ಪ್ರಮುಖ ಖಳನಾಯಕನೇ ಈ ಮಿಥೈನ್ ಆಲ್ಕೋಹಾಲು. ಇನ್ನುಳಿದ ಶುದ್ಧ ಶರಾಬು ಕಲಬೆರಕೆ ಮಾಡುವ ವಸ್ತು ಕೊಳಚೆ ನೀರು ಆಗಿದೆ.**

**ಶೇಂದಿಯ ಬದಲಿಗೆ ಜನ ಎಂದು ಈ ಶರಾಬನ್ನು ಕುಡಿಯಲು ಪ್ರಾರಂಭಿಸಿದರೋ ಅಂದೇ ಇದೊಂದು ಸಾಮಾಜಿಕ ಸಮಸ್ಯೆಯಾಗತೊಡಗಿತು**. ಏಕೆಂದರೆ ಶೇಕಡಾ 30ಕ್ಕಿಂತ ಹೆಚ್ಚಿನ ಈಥೈಲ್ ಆಲ್ಕೋಹಾಲುಳ್ಳ ಪಾನೀಯವನ್ನು ಸೇವಿಸಿದಾಗ ರಕ್ತದಲ್ಲಿ ಇದರ ವೇಗ ಹೆಚ್ಚಿ ಮನಸ್ಸನ್ನು ಕೆರಳಿಸಿ, ಮನುಷ್ಯ ವಿಕೃತನಾಗತೊಡಗುತ್ತಾನೆ. ಇದು ಅಮಲು ಪದಾರ್ಥವಾಗುತ್ತದೆ. ಮನುಷ್ಯ ಇದರ ದಾಸನಾಗುತ್ತಾನೆ.ಈ ಹಂತದಲ್ಲಿ ಈ ಮನುಷ್ಯ ಸಮಾಜಕ್ಕೊಂದು ಪಿಡುಗಾಗುತ್ತಾನೆ. ಅಶುದ್ಧವಾದ ಶರಾಬು ಕುಡಿದು, ಅನಿಯಮಿತ ಜೀವನ ನಡೆಸಿ ತನ್ನ ಆರೋಗ್ಯವನ್ನು ಹಾಳುಮಾಡಿಕೊಳ್ಳುತ್ತಾನೆ. ಪ್ರಾರಂಭ ಹೇಗೇ ಆಗಲಿ ಅಂತ್ಯ ಮಾತ್ರ ದಾರುಣವೇ ಆಗಿರುತ್ತದೆ. ಕುಡುಕನಿಗೂ, ಅವನ ಹಣದ ಥೈಲಿಗೂ, ಅವನ ಆರೋಗ್ಯಕ್ಕೂ, ಅವನ ಪರಿವಾರಕ್ಕೂ ಮತ್ತು ಸುತ್ತಲಿನ ಸಮಾಜಕ್ಕೂ.**ಆದ್ದರಿಂದ ಶರಾಬು ಸೇವನೆ ತಪ್ಪು. ಇದರ ಅಂತ್ಯ ಸರ್ವನಾಶ! ಮದ್ಯವ್ಯಸನಿಯ, ಆತನ ಕುಟುಂಬದವರ, ನಂಬಿದವರ, ಸುತ್ತ ಸಮಾಜದ ಸರ್ವನಾಶ!**

## ಮದ್ಯ ಎಂದರೇನು ?

ಆಲ್ಕೋಹಾಲ್ ಅಥವಾ ಮದ್ಯಸಾರದಲ್ಲಿ ಅನೇಕ ಬಗೆಗಳಿವೆ. ನಾವು ಕುಡಿಯುವ ಆಲ್ಕೋಹಾಲ್‌ಗೆ ಈಥೈಲ್ ಆಲ್ಕೋಹಾಲ್ ಎಂದು ಹೆಸರು. ಇದರ ರಾಸಾಯನಿಕ ಸೂತ್ರ $C_2H_5OH$. ಇದು ವರ್ಣರಹಿತವಾದದ್ದು, ತೀಕ್ಷ್ಣವಾದ, ಚುರುಗುಟ್ಟಿಸುವ ರುಚಿಯುಳ್ಳದ್ದು. ಇದು

ಶರ್ಕರಪಿಷ್ಟಗಳನ್ನು ಕೊಳೆಹಕಿ, ಕಿಣ್ವಗಳ ಕ್ರಿಯೆಯಿಂದ ಹುದುಗೇಳಸುವ (ಫರ್ಮೆಂಟೇಷನ್) ಕ್ರಿಯೆಯಿಂದ ತಯಾರಿಸುವಂಥದ್ದು. ಮತ್ತೊಂದು ಮಿಥೈಲ್ ಆಲ್ಕೋಹಾಲ್. ಇದು ಮೇಲಿನದಕ್ಕಿಂತ ಭಿನ್ನವಾದದ್ದು. ಇದು ಉದ್ಯಮಗಳಲ್ಲಿ ಬಳಕೆಯಾಗುವಂಥದ್ದು. ವಿಷಭರಿತವಾದದ್ದು. ಮರಗಳಿಂದ ತೆಯುವಂಥದ್ದು. ಈಥೈಲ್ ಆಲ್ಕೋಹಾಲ್ ಯಾವ ಪೋಷಕಾಂಶಗಳೂ ಇಲ್ಲದ ಆಹಾರವಾಗಿದೆ. ಅದು ಪ್ರತಿ ಸ್ಟಾಂಡರ್ಡ್ ಡ್ರಿಂಕ್‌ಗೆ ಸುಮಾರು 200 ಕ್ಯಾಲೊರಿಗಳನ್ನು ಒಳಗೊಂಡಿರುತ್ತದೆ. ಆದರೆ ವಿಟಮಿನ್‌ಗಳು, ಪ್ರೋಟೀನ್‌ಗಳು, ಕಾರ್ಬೋಹೈಡ್ರೇಟ್‌ಗಳು ಅಥವಾ ಕೊಬ್ಬನ್ನು ಹೊಂದಿರುವುದಿಲ್ಲ. ಬೀರು ಕುಡಿಯುವವರಿಗೆ ಡೊಳ್ಳು ಬರಲು ಈ ಕ್ಯಾಲೊರಿಗಳು ಕಾರಣವಾಗಿರುತ್ತವೆ. ಆದುದರಿಂದ ಆಲ್ಕೋಹಾಲನ್ನು ತಪ್ಪದೆ ಹಾಗೂ ಮಿತಿ ಮೀರಿ ಕುಡಿಯುವಾತ ಅಗತ್ಯವಾದ ಪೋಷಕಾಂಶಗಳಲ್ಲದೆ ಕ್ಯಾಲೊರಿಗಳನ್ನು ಹೀರಿಕೊಳ್ಳುತ್ತಾನೆ.ದೀರ್ಘ ಕಾಲದ ಮದ್ಯ ಸೇವನೆಯು ಶರೀರದಿಂದ ಪೋಷಕಾಂಶಗಳನ್ನು ಹೀರಿಬಿಡುತ್ತದೆ. ಮದ್ಯ ಸೇವನೆಯಿಂದ ಬಿ ಕಾಂಪ್ಲೆಕ್ಸ್ ವಿಟಮಿನ್‌ಗಳು ಸರಿ ಸುಮಾರು ತೀರಿಹೋಗುತ್ತವೆ. ಕುಡಿಯುವುದರಿಂದ ವಿಟಮಿನ್ ಸಿ ಸಹ ನಷ್ಟವಾಗುತ್ತದೆ. ಮದ್ಯವನ್ನು ಸಣ್ಣ ಪ್ರಮಾಣದಲ್ಲಿ ಅಥವಾ ದೊಡ್ಡ ಪ್ರಮಾಣದಲ್ಲಿ ತೆಗೆದುಕೊಂಡರೂ, ಆರೋಗ್ಯ ಕಾಪಾಡಲು ಅಗತ್ಯವಾದ ಅನೇಕ ವಸ್ತುಗಳು ದೇಹದಿಂದ ನಷ್ಟವಾಗುತ್ತವೆ.

ಮಾದಕ ಪಾನೀಯಗಳಲ್ಲಿರುವ ಮದ್ಯವಸ್ತುವಿನ ಪ್ರಮಾಣ ಸಾಧಾರಣವಾಗಿ ಮುಂದೆ ಹೇಳುವಂತೆ ಇದೆ. ಬೀರ್, ಏಲ್, ಪೋರ್ಟರ್ ಮತ್ತು ಸ್ಟಾಟ್ ಇವುಗಳಲ್ಲಿ ಶೇಕಡ ೪ ರಿಂಸ ೭ ಆದರೆ ಬೀರ್ ಪದಾರ್ಥಗಳ ಸಮಿತಿಯ(Beer Materials Committee)ಮುಂದೆ ಕೊಟ್ಟ ಸಾಕ್ಷ್ಯದಲ್ಲಿ, ಮೊದಲಿನ ಕೆಲವು ಪಾನೀಯಗಳಲ್ಲಿ ಶೇಕಡಾ ೧೦ ಮಾದಕ ವಸ್ತು ಇದೆಯೆಂದು ಕೆಲವರು ನುಡಿದರು. ನಮ್ಮ ದೇಶದ ಗುಡ್ಡಗಾಡಿನವರೂ ಆದಿವಾಸಿಗಳೂ ಮಾತ್ರವೇ ಉಪಯೋಗಿಸುವ ಪಾಚ್ಯೆ ಎಂಬ ಮದ್ಯದಲ್ಲಿ ಶೇಕಡ ೫ ರಿಂದ ೭ ರವರೆಗೂ ಟಾಡಿಯಲ್ಲಿ ಶೇಕಡಾ ೮ ರವರೆಗೂ ಮಾದಕ ವಸ್ತು ಇದೆ. ಪೋರ್ಟ್‌ವೈನ್, ಶೆರ್ರಿ ಕ್ಲಾರೆಟ್ ಮತ್ತು ಶಾಂಪೈನ್ ಈ ಪಾನೀಯಗಳಲ್ಲಿ ಶೇಕಡಾ ೧೦ ರಿಂಸ ೨೦ ರವರೆಗೆ ಮರೆಸಾಲಾ (Marsala) ಎಂಬುದು ಅತ್ಯಂತ ಮದಕಾರಿ ಹೆಂಡ. ಇದರಲ್ಲಿ ಮಾದಕ ದ್ರವ್ಯ ಶೇಕಡಾ ೨೫ ಇದೆ. ಮೇಲೆ ಸೂಚಿಸಿರುವ, ಮನೆಯಲ್ಲಿ ತಯಾರಾದ ಹೆಂಡಗಳಲ್ಲಿ ಶೇ ೧೦ ಕ್ಕಿಂತ ಹೆಚ್ಚು ಮಾದಕ ದ್ರವ್ಯಗಳಿಲ್ಲ. ಇವುಗಳನ್ನು ಬೇರೆ ಬೇರೆ ಹಣ್ಣಿನ ರಸಗಳನ್ನು ಭಟ್ಟಿ ಇಳಸುವುದರಿಂದ

ಮಾಡುತ್ತಾರೆ. ಇತರ ಹೆಂಡಗಳಿಂದ ಹೇಗೆ ಅಮಲು ಏರುವುದೋ, ಮನೆಗಳಲ್ಲಿ ಮಾಡಿದ ಈ ಹಣ್ಣಿನ ರಸ ಪಾನೀಯಗಳಿಂದಲೂ ಅಮಲು ಏರುವುದು. ಭಟ್ಟಿ ಇಳಿಸಿದ ಬ್ರಾಂದಿ, ವಿಸ್ಕಿ, ರಮ್, ಗಿನ್ ಮುಂತಾದವುಗಳಲ್ಲಿ ಶೇಕಡ ೪೦ ರಿಂದ ೫೫ ರವರೆಗೆ (ಅದಕ್ಕೆ ಕಮ್ಮಿ ಇಲ್ಲದಂತೆ) ಮಾದಕ ದ್ರವ್ಯವಿದೆ. ಸಾರಾಯಿಯಲ್ಲಿ ಶೇಕಡಾ ೩೫ ರಿಂದ ೪೦ ರವರೆಗೆ ಮಾದಕ ದ್ರವ್ಯವಿದೆ. "ರಕ್ತದಲ್ಲಿ ಶೇಕಡ ೧/೪ ಭಾಗ (.೨೫) ಮಾದಕ ದ್ರವ್ಯ ಸೇರಿದ ಕೂಡಲೇ ಹೃದಯ ಕ್ರಿಯೆ ನಿಧಾನವಾಯಿತು. ಶೇಕಡ ೧/೨ ಭಾಗ (.೫) ಮದ್ಯ ರಕ್ತದಲ್ಲಿ ಸೇರಿದ ಕೂಡಲೇ, ತನ್ನನ್ನು ಪೋಷಿಸುವ ರಕ್ತನಾಳಗಳಿಗೇ ರಕ್ತವನ್ನು ದಬ್ಬಲು, ಹೃದಯ ಪೂರ್ಣವಾಗಿ ನಿಶ್ಯಕ್ತವಾಯಿತು." ಮದ್ಯವನ್ನು ಸ್ವೀಕರಿಸಿದ ಕೂಡಲೇ ಅರ್ಧ ಗಂಟೆಯೊಳಗಾಗಿ ಹೃದಯದ ಕಾರ್ಯ ಶೇಕಡಾ ೬ ರಷ್ಟು ನಿಧಾನವಾಗುತ್ತದೆ. ಮಾದಕವಸ್ತು ಹೃದಯದಿಂದ ಹೊರದೂಡಲ್ಪಡುವವರೆಗೆ ಹೃದಯ ದುರ್ಬಲವಾಗಿಯೇ ಇರುತ್ತದೆ. ಅದರ ಫಲವಾಗಿ ಹೃದಯ ತನ್ನ ಸ್ವಭಾವದಂತೆ ಪೂರ್ಣವಾಗಿ ಸಂಕುಚಿತವಾಗುವುದಿಲ್ಲ. ಅಲ್ಲಿಂದ ಹೊರದೂಡಲ್ಪಡಬೇಕಾದ ರಕ್ತವನ್ನು ಹೊರದೂಡುವುದಿಲ್ಲ. ಇದರ ಫಲವಾಗಿ ಹೃದಯ ರಕ್ತಪೂರ್ಣವಾಗಿ ಅದರ "ಗೋಡೆಗಳು" ಹಿಗ್ಗುತ್ತವೆ.

## ಮದ್ಯವ್ಯಸನ ಎಂದರೇನು ?

**ಕ್ರಿ.ಶ.1849ರಲ್ಲಿ ಸ್ವೀಡಿಶ್ ವೈದ್ಯ ಮ್ಯಾಗ್ನಸ್ ಹಸ್ ಎಂಬುವನು ಮದ್ಯಪಾನ ಮಿತಿ ಮೀರಿ ಕುಡಿಯುವುದನ್ನೇ ಮದ್ಯವ್ಯಸನ ಎಂದನು. ವ್ಯಸನೆಂಬುದೊಂದು ರೋಗವಾಗಿದೆ. ವಿಶ್ವದ 5 ಮಾರಕ ರೋಗಗಳಲ್ಲಿ ಒಂದು ಎಂಬುದಾಗಿ 1956ರಲ್ಲಿ ವಿಶ್ವ ಆರೋಗ್ಯ ಸಂಸ್ಥೆಯು ಸಾರಿದೆ. ಶ್ರೀ ರಾಮಾಯಣದಲ್ಲಿ ವಿವರಿಸಿದ ಪಂಚ ಮಹಾಪಾತಕಗಳಲ್ಲಿ ಸುರಾಪಾನ ಒಂದಾಗಿದೆ.**

ಮದ್ಯಪಾನವು ಅರೆಬಿಕ್‌ನ **"ಆಲ್-ಕುಹಲ್"** ಎಂಬ ಶಬ್ಧದಿಂದ ಬಂದಿರುತ್ತದೆ. ಕುಡಿಯದೇ **ಬದುಕಲು ಸಾಧ್ಯವಿಲ್ಲ ಎನ್ನುವಂತಹ ಅವಸ್ಥೆಗೆ ಮದ್ಯವ್ಯಸನ ಎನ್ನುತ್ತಾರೆ.** ವ್ಯಸನವೆಂಬುದು ಒಂದು ರೋಗವಾಗಿದೆ. ವಿಶ್ವದ 5 ಮಾರಕ ರೋಗಗಳಲ್ಲಿ ಒಂದು ಎಂಬುದಾಗಿ 1956 ರಲ್ಲಿ ವಿಶ್ವ ಆರೋಗ್ಯ ಸಂಸ್ಥೆ ಸಾರಿದೆ. ಇಲ್ಲಿ ವ್ಯಕ್ತಿಗೆ ಕುಡಿತದ ಬಗ್ಗೆ ನಿಯಂತ್ರಣವಿರುವುದಿಲ್ಲ. ಅವಕಾಶ ಒದಗಿ ಬಂದು ಒಮ್ಮೆ ಕುಡಿಯಲು ಪ್ರಾರಂಭಿಸಿದರೆ ಮಿತಿಮೀರಿದ್ದು ಗೊತ್ತೇ ಆಗಿರುವುದಿಲ್ಲ. ಪ್ರತಿದಿನ ಅನ್ನ ಬಿಟ್ಟರೂ ಕುಡಿತ ಬಿಡುವುದಿಲ್ಲ. ಇದುವೇ ವ್ಯಸನವಾಗಿದೆ. ಕುಡಿತದ ಪ್ರಮಾಣ ಹೆಚ್ಚಿಸುವುದು, ನಿಯಂತ್ರಣ ಕಳೆದುಕೊಳ್ಳುವುದು, ಕುಡಿತ

ತವಕ, ಗುಂಗು ಮತ್ತು ಹಿಂತೆಗೆತದ ಚಿಹ್ನೆಗಳಾದ ಕೈಕಾಲು ನಡುಕ, ವಾಕರಿಕೆ, ವಾಂತಿ, ನಿಶ್ಯಕ್ತಿ ಇತ್ಯಾದಿ ಲಕ್ಷಣಗಳು ಮದ್ಯವ್ಯಸನಿಗಳಲ್ಲಿ ಕಾಣಬರುತ್ತದೆ.

ಮದ್ಯವ್ಯಸನಿಯು ಒಬ್ಬ/ಒಬ್ಬಳು ಮಿತಿಮೀರಿ ಕುಡಿಯುವಾತ/ಳು. ಆಲ್ಕೋಹಾಲನ್ನು ಈತ/ಈಕೆ ಎಷ್ಟು ಅವಲಂಬಿಸಿರುತ್ತಾನೆ/ಳೆಂದರೆ, ಸಕಾಲದಲ್ಲಿ ಕುಡಿಯಲು ದೊರಕದಿದ್ದರೆ ಈತನ/ಳ ಮಾನಸಿಕ ಸ್ಥಿತಿ, ಹಾಗೆಯೇ ಸಾಮಾಜಿಕ ನಡವಳಿಕೆ ಏರುಪೇರಾಗುತ್ತದೆ. ಈತ ಸಹ ಆಗಾಗ ವಾರಗಟ್ಟಲೆ, ತಿಂಗಳುಗಟ್ಟಲೆ ಕುಡಿಯದೆ ಇರಬಲ್ಲ. ಆದರೆ ಆ ಅಂಶದಿಂದ ಮಾತ್ರವೇ ಈತ ತನ್ನ ಮಿತಿ ಅರಿತು ಕುಡಿಯುವವನಾಗುವುದಿಲ್ಲ. ಒಮ್ಮೆ ಪುನಃ ಕುಡಿಯಲು ಪ್ರಾರಂಭಿಸಿದರೆ ಈತನ ಈ ಸಲದ ಅಗತ್ಯ ಹಿಂದಿನ ಮಿತಿಗಿಂತಲೂ ಅಧಿಕವಾಗಿರುತ್ತದೆ. ಆತನಿಗೆ ಒಂದು ರೀತಿಯ ಮರೆವು ರೋಗ ಉಂಟಾಗುತ್ತದೆ. ಹಿಂದಿನ ದಿನ ಕುಡಿದಾಗಿನ ತನ್ನ ನಡವಳಿಕೆ ಬಗ್ಗೆ ಆತನಿಗೆ ನೆನಪಿರುವುದಿಲ್ಲ. ತಾನು ಆಡಿದ್ದು ಅಥವಾ ಮಾಡಿದ್ದು ಅಸ್ಪಷ್ಟವಾಗಿ ನೆನಪಿರುತ್ತದೆ ಅಷ್ಟೆ. ಮನಸ್ಸಿನ ಆಹ್ಲಾದಕ್ಕಾಗಿ ಕುಡಿಯದೆ ಮದ್ಯದ ಅಮಲಿಗೋಸ್ಕರ ಕುಡಿಯಬೇಕೆಂಬ ಬಯಕೆ ಉಂಟಾಗುವಾಗ ಗಂಭೀರವಾದ ಹಾಗೂ ಅಪಾಯಕಾರಿಯಾದ ಬದಲಾವಣೆ ಸಂಭವಿಸುತ್ತದೆ.ಆತ ಸದಾ ಕುಡಿಯುವುದರಲೇ ಮಗ್ನನಾಗಿರುತ್ತಾನೆ. ಕೆಲಸ ಮಾಡುವಾಗ ಕುಡಿತದ ಕನಸು ಕಾಣುತ್ತಿರುತ್ತಾನೆ. ಕುಡಿಯುವ ವೇಳೆಗಾಗಿ ಕಾಯುತ್ತಿರುತ್ತಾನೆ. ಆದಷ್ಟು ಬೇಗ ಅಮಲೇರಲೆಂದು ತನ್ನ ಪಾನೀಯಗಳನ್ನು ಆತ ಗಟಗಟ ಕುಡಿದು ಮುಗಿಸಲು ಪ್ರಾರಂಭಿಸುತ್ತಾನೆ. ಆಲ್ಕೋಹಾಲಿನ ಪ್ರಭಾವದಿಂದ ಆಗಾಗ ಮರೆವುರೋಗ ಉಂಟಾಗುತ್ತದೆ. ಆತ ತನ್ನ ಕುಡಿತದ ಮೇಲೆ ಹತೋಟಿ ಕಳೆದುಕೊಳ್ಳುವ ಹಂತಕ್ಕೆ ತಲುಪುತ್ತಾನೆ. ಆತನ ನಡವಳಿಕೆ ಆಡಂಬರದ್ದಾಗುತ್ತದೆ. ಅಗತ್ಯವಿಲ್ಲದ ವಸ್ತುಗಳನ್ನು ಕೊಳ್ಳುತ್ತಾನೆ. ಮನೆಯವರಿಗೆ, ಇತರರಿಗೆ ದುಬಾರಿ ಬೆಲೆಯ ಉಡುಗೊರೆಗಳನ್ನು ಒಯ್ಯುತ್ತಾನೆ.

ಇತರರ ಜತೆಗೆ ಕಾರಣವಿಲ್ಲದೇ ರೇಗುತ್ತಾನೆ. ತನ್ನ ಎಲ್ಲ ತೊಡಕುಗಳಿಗೆ ಅವರೇ ಕಾರಣವೆಂದು ಭಾವಿಸುತ್ತಾನೆ. ತರುವಾಯ, ಹಾಗೆ ಭಾವಿಸಿ ತಾನು ತಪ್ಪು ಮಾಡಿದೆ ಎಂದು ಪಶ್ಚಾತ್ತಾಪ ಪಡುತ್ತಾನೆ. ಆತ ಹೆಚ್ಚು ಹೆಚ್ಚಾಗಿ ಕುಡಿತದಲ್ಲಿ ಮುಳುಗಿದಂತೆ ಬೆರೆ ಬೇರೆ ಮಟ್ಟಗಳಲ್ಲಿ ಸಾಮಾಜಿಕ ಸಂಬಂಧಗಳನ್ನು ಬೆಳೆಸಿಕೊಳ್ಳತೊಡಗುತ್ತಾನೆ. ಮುಖ್ಯವಾಗಿ, ತನ್ನ ಕುಡಿತದ ಶೈಲಿಗೆ ಹೊಂದಿಕೊಳ್ಳುವವರೊಂದಿಗೆ ಸ್ನೇಹ ಬೆಳೆಸಿಕೊಳ್ಳುತ್ತಾನೆ. ಮಿತಿಮೀರಿದ

ಕುಡಿತದಿಂದಾಗುವ ಹ್ಯಾಂಗೋವರ್ ಆತನ ಕೆಲಸದಿಂದ ಆತನನ್ನು ದೂರವಿರಿಸುತ್ತದೆ. ತನ್ನ ಕುಟುಂಬದವರ ಕ್ಷೇಮದ ಬಗ್ಗೆ ಕಾಳಜಿ ತೋರಿಸುವುದಿಲ್ಲ. ಮದ್ಯದ ಮೇಲೆ ಆತನ ದೈಹಿಕ ಅವಲಂಬನೆ ಸ್ಪಷ್ಟವಾಗುತ್ತದೆ. ಆತನ ರಕ್ತದಲ್ಲಿ ಆಲ್ಕೋಹಾಲಿನ ಪ್ರಮಾಣವನ್ನು ಸದಾ ಒಂದು ನಿರ್ದಿಷ್ಟ ಮಟ್ಟದಲ್ಲಿರಿಸಬೇಕಾಗುತ್ತದೆ. ಅದಕ್ಕಾಗಿ ಆತ ಕುಡಿಯಬೇಕಾಗುತ್ತದೆ. ತನ್ನ ಹ್ಯಾಂಗೋವರ್, ಭೀತಿ, ಅಪರಾಧಿ ಭಾವನೆ, ಕಳವಳ, ನಿರುತ್ಸಾಹ – ಇವುಗಳ ನಿವಾರಣೆಗಾಗಿ ಮತ್ತೆ ಕುಡಿಯುತ್ತಾನೆ. ಆತನ ರಕ್ತದಲ್ಲಿ ನಿರ್ದಿಷ್ಟ ಆಲ್ಕೋಹಾಲಿನ ಪ್ರಮಾಣ ತಗ್ಗಿದ ಕೂಡಲೇ ಈ ಎಲ್ಲ ಆತನನ್ನು ಮತ್ತೆ ಬಾಧಿಸತೊಡಗುತ್ತವೆ.

## <u>ಮದ್ಯಪಾನದ ಸಮಸ್ಯೆಗಳು</u>

ಮಾದಕ ವಸ್ತುಗಳಲ್ಲೊಂದಾದ ಮದ್ಯಪಾನವು ಸಂಮೋಹಕ ಅಥವಾ ಮಂಕುಗೊಳಿಸುವ ಪದಾರ್ಥಗಳು (Depressant) ವರ್ಗಕ್ಕೆ ಸೇರಿದ ವಂಚಕ ಪಾನೀಯವಾಗಿದೆ. ಮುಖ್ಯವಾಗಿ ಹಳ್ಳಿಯ ಬಡ ರೈತರು, ದಿನ ಕೂಲಿ ಕಾರ್ಮಿಕರು, ಈ ವ್ಯಸನಕ್ಕೆ ಬಲಿಯಾಗಿರುವುದು ಶೋಚನೀಯವಾಗಿದೆ. ಸ್ನೇಹಿತರ ಒತ್ತಾಯಕ್ಕೋ, ಕುತೂಹಲಕ್ಕೋ, ಮೋಜಿಗಾಗಿಯೋ ಆರಂಭವಾದ ಕುಡಿತ ದಿನಕಳೆದಂತೆ ಅಭ್ಯಾಸವಾಗಿ, ಕೊನೆಗೆ ಚಟವಾಗಿ ಕಾಡುವ ವಿಷಪದಾರ್ಥವಾಗಿದೆ. ಬೆಂಕಿ ದೇಹವನ್ನು ಸುಟ್ಟರೆ, ಮದ್ಯಪಾನ ದೇಹಾತ್ಮವನ್ನು ಸುಡುತ್ತದೆ. ಕುಡಿತದ ದವಡೆಗೆ ಸಿಲುಕಿದ ವ್ಯಕ್ತಿ ತನ್ನೆಲ್ಲಾ ಜವಾಬ್ದಾರಿ (ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ, ಔದ್ಯೋಗಿಕ, ಆಧ್ಯಾತ್ಮಿಕ)ಗಳನ್ನು ಮರೆತು ಇಚ್ಛಾಶಕ್ತಿ, ವಿಚಾರಶಕ್ತಿ, ಆತ್ಮಶಕ್ತಿ, ವಿವೇಕಗಳನ್ನು ಕಳಕೊಂಡು ಸಾಯುತ್ತಾನೆ. ಕುಡಿತಕ್ಕೆ ಜಾತಿ, ಮತ, ಭೇದವಿಲ್ಲ. ಲಿಂಗ ತಾರತಮ್ಯವಿಲ್ಲ. ಪ್ರಸ್ತುತ ಮಹಿಳೆಯರು ಮತ್ತು ಮಕ್ಕಳೂ ಸಹ ಕುಡಿಯುತ್ತಿರುವುದು ಸಾಮಾನ್ಯವಾಗಿ ಕಂಡುಬರುತ್ತಿದೆ.

ಅನುವಂಶಿಕ ಕಾರಣಗಳು, ಮಾನಸಿಕ ಕಾರಣಗಳು, ದೈಹಿಕ ಕಾರಣಗಳು, ಮೂಢನಂಬಿಕೆಗಳು ಪ್ರಥಮ ಗುಟುಕು ಮದ್ಯ ಸೇವನೆಗೆ ಕಾರಣವಾಗುತ್ತಿರುವುದು ಸಾಮಾನ್ಯವಾಗಿ ಕಂಡುಬರುತ್ತಿದೆ. ಮದ್ಯ ಮೆದುಳಿನ ಕ್ರಿಯೆಯನ್ನು ಉದ್ದೀಪನಗೊಳಿಸುವ ವಸ್ತು ಎಂದು ಭಾವಿಸುವವರೇ ಜಾಸ್ತಿ. ದೇಹದ ಹಲವಾರು ಕಾಯಿಲೆಗೆ ಮದ್ಯಪಾನ ಸಿದ್ಧ ಔಷಧ ಎಂಬ ತಪ್ಪು ಕಲ್ಪನೆ ಜನರಲ್ಲಿ ತುಂಬಿ ಹೋಗಿದೆ. ಸ್ತಿಮಿತತೆಯಲ್ಲಿ ಮದ್ಯಸೇವಿಸಿದರೆ ಅಪಾಯವಿಲ್ಲ

ಎನ್ನುವ ವಾದ ಜನ ಸಮುದಾಯದಲ್ಲಿದೆ. ಸಭೆ ಸಮಾರಂಭಗಳಲ್ಲಿ ನಿರ್ದಾಕ್ಷಿಣ್ಯವಾಗಿ ಮದ್ಯದ ಬಳಕೆ ಮಾಡುವುದು ಹಾಗೂ ಮತದಾನದ ಸಮಯದಲ್ಲಿ ಮತ ಪಡೆಯುವ ಸ್ವಾರ್ಥಕ್ಕಾಗಿ ಮದ್ಯದ ವಿತರಣೆ ಮಾಡುವ ಕೆಟ್ಟ ಪದ್ಧತಿ ಸಮಾಜದಲ್ಲಿ ಚಾಲ್ತಿಯಲ್ಲಿದೆ.

ವ್ಯಸನಿಗೆ ಕುಡಿತವೆಂಬುದು ಆರಂಭದಲ್ಲಿ ಅಮೃತವಾಗಿದ್ದರೂ ಇದೊಂದು ಸಾಮಾಜಿಕ ಸಮಸ್ಯೆ, ಭಯಾನಕ ರೋಗ, ಸಾಮಾಜಿಕ ಪಿಡುಗು, ಕೆಟ್ಟ ಚಟ, ಭೀಕರ ಸಮಸ್ಯೆಯೆಂದು ಗೊತ್ತಾಗುವುದೇ ಇಲ್ಲ. 'ಕೆಟ್ಟಮೇಲೆ ಬುದ್ಧಿ' ಎಂಬ ನಾಣ್ನುಡಿಯಂತೆ ಕುಡಿದು ಸರ್ವನಾಶವಾದ ಮೇಲೆ ಯೋಚಿಸಿ ಕಂಗಾಲಾಗುವ ವ್ಯಸನಿಗಳೇ ಪ್ರಸ್ತುತ ಸಮಾಜದಲ್ಲಿ ತುಂಬಿ ಹೋಗಿರುವುದು ದುರಂತವಾಗಿದೆ.

ವಿಶ್ವ ಆರೋಗ್ಯ ಸಂಸ್ಥೆ ಹೇಳದಂತೆ, **'ಮದ್ಯಪಾನ ವ್ಯಸನವೆಂಬುದೊಂದು ರೋಗ'**ವಾಗಿದೆ. ನಿರ್ದಿಷ್ಟ ಸಮಯದಲ್ಲಿ, ಸ್ತಿಮಿತತೆಯಲ್ಲಿ ಮದ್ಯಪಾನ ಮಾಡುತ್ತಿದ್ದವರು ಕ್ರಮೇಣ ಸಮಯ ಪ್ರಮಾಣವನ್ನು ಲೆಕ್ಕಿಸದೆ ಕುಡಿಯುವುದೇ ಈ ರೋಗದ ಲಕ್ಷಣವಾಗಿದೆ. ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ ಮದ್ಯಪಾನವನ್ನು ಬಳಸುವ ನೂರು ಜನರಲ್ಲಿ 23 ಮಂದಿ ವ್ಯಸನಿಗಳಾಗುತ್ತಾರೆ. ಆರಂಭದಲ್ಲಿ ಸ್ಥಿಮಿತತೆಯ ಹೆಚ್ಚಳ ನಂತರ ತಾಳಿಕೆ ತಾರಕಕ್ಕೇರುತ್ತದೆ. ವ್ಯಕ್ತಿ ಅತ್ಯಧಿಕ ಪ್ರಮಾಣದಲ್ಲಿ ಮದ್ಯ ಸೇವಿಸಿ ಊಟ, ನಿದ್ದೆಯಿಲ್ಲದೆ ಬಳಲುತ್ತಾನೆ. ಪ್ರತೀನಿತ್ಯ ಬೆಳಗ್ಗೆ ಏಳುತ್ತಿದ್ದಂತೆಯೇ ಮದ್ಯ ಸೇವನೆ ಮಾಡಬೇಕಾಗುವ ಅನಿವಾರ್ಯ ಪರಿಸ್ಥಿತಿ ಬರುತ್ತದೆ. ನಂತರ ಒಂದು ಹೊತ್ತಿಗೆ ಕುಡಿಯದೇ ಹೋದರೆ ಹಿಂತೆಗೆತದ ಚಿಹ್ನೆಗಳು (Withdrawal Symptoms) ಕಾಣಿಸಿಕೊಳ್ಳುತ್ತದೆ. ಮುಖ್ಯವಾಗಿ ಕೈಕಾಲು ನಡುಗುವುದು, ವಾಕರಿಗೆ, ವಾಂತಿ, ಊಟ ಸೇರದಿರುವುದು, ನಿಶ್ಯಕ್ತಿ, ಮೈಕೈನೋವು, ದಣಿವು, ರಕ್ತದೊತ್ತಡ, ಮಾನಸಿಕ ಭ್ರಮೆ, ಎದೆಬಡಿತ, ಬೆವರುವುದು, ಭಯ, ಅಸಹಾಯಕತೆ, ಸಿಟ್ಟು, ಅಸಹನೆ, ನಿರಾಸಕ್ತಿ, ಲೈಂಗಿಕ ವೈಪರೀತ್ಯ, ತಲೆನೋವು, ತಲೆಭಾರ, ನಿದ್ರಾಹೀನತೆ, ಫಿಟ್ಸ್, ನಡುಕ ಸನ್ನಿ (Delirium Tremens), ಚಿತ್ತ ವಿಕಲತೆ, ಬಯಕೆ (Craving), ಆತ್ಮಹತ್ಯೆ ಹೀಗೆಲ್ಲಾ ಒಂದರ ಹಿಂದೆ ಇನ್ನೊಂದು ಮೋಡದಂತೆ ಸಮಸ್ಯೆಗಳು ಆವರಿಸಿ ಮಿಂಚಿನಂತೆ ಶಾರೀರಿಕ ಮತ್ತು ಮಾನಸಿಕ ವಿಚಾರಗಳಿಗೆ ಢಿಕ್ಕಿ ಹೊಡೆದು (Lack of Co-ordination) ಸಿಡಿಲಿನಂತೆ ಸ್ಫೋಟಗೊಳ್ಳುವ ಈ ಚಿಹ್ನೆಗಳಿಂದ ಮದ್ಯವ್ಯಸನಿ ಕನಿಷ್ಠ 1 ತಿಂಗಳಿನಿಂದ ಗರಿಷ್ಠ 2 ತಿಂಗಳವರೆಗೂ ಜೀವನ್ಮರಣ

ನರಳಾಟ ನಡೆಸಬೇಕಾಗುತ್ತದೆ. ಈ ಹಂತದಲ್ಲಿ ರೋಗಿ ಕೆಲವೊಮ್ಮೆ ಏನು? ಎಲ್ಲಿದ್ದಾನೆಂಬುದು ಅವನಿಗೇ ತಿಳಿದಿರುವುದಿಲ್ಲ. ಆದರೂ ಮನೆಯವರು ಪ್ರೀತಿ ವಿಶ್ವಾಸ ಹಾಗೂ ಅನುಕಂಪದಿಂದ ಸೇವೆ ನೀಡಿ ಚಿಕಿತ್ಸೆಗೆ ಸ್ಪಂದಿಸಿದರೆ ವ್ಯಸನಿ ಬದುಕಲು ಸಾಧ್ಯವಿದೆ.

## ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳು:-

ಮದ್ಯವ್ಯಸನದ ವಿಮುಕ್ತಿಯ ಚಿಕಿತ್ಸಾ ವಿಧಾನಗಳನ್ನು 4 ಪ್ರಕಾರಗಳಾಗಿ ವಿಂಗಡಿಸಲಾಗಿದೆ.

1. **ವೈದ್ಯಕೀಯ – ಸಾಮಾಜಿಕ ಚಿಕಿತ್ಸಾ ವಿಧಾನ:**

   ಈ ವಿಧಾನದಲ್ಲಿ ಮದ್ಯವ್ಯಸನ ರೋಗದಿಂದ ವಿಮುಕ್ತಿ ಹೊಂದಲು ಬಂದವರಿಗೆ ಮೊದಲಿಗೆ ಹಿಂತೆಗೆತದ ಚಿಹ್ನೆಗಳ ಸುಧಾರಣೆಗಾಗಿ, ನಂತರ ಮಾನಸಿಕ ಸಮಸ್ಯೆಗಳಿಗೆ ಔಷಧಿ ನೀಡಲಾಗುತ್ತದೆ. ಇದರ ಜೊತೆಗೆ ಮದ್ಯವ್ಯಸನಿಗಳ ಕುಟುಂಬದವರ ಸಮಸ್ಯೆಗಳ ಬಗ್ಗೆ ಮಾಹಿತಿ ಸಂಗ್ರಹಿಸಿ, ಪರಿಹಾರ ನೀಡುತ್ತಾರೆ. ಕುಡಿತ ರೋಗ ಪುನರಾವರ್ತಿತ ಕಾಯಿಲೆಯಾಗಿದ್ದು, ಪುನರಾವರ್ತಿತ ಆಗದಂತೆ ನೋಡಿಕೊಳ್ಳಲು ಅವರ ಆರೈಕೆ, ಆರೋಗ್ಯ ಮತ್ತು ಜಾಗೃತೆ ವಹಿಸಲು ವೈದ್ಯರು, ಆಪ್ತ ಸಮಾಲೋಚಕರು ಮದ್ಯವ್ಯಸನಿಗಳ ಮನೆಯವರಿಗೆ ಮಾಹಿತಿ ನೀಡುತ್ತಾರೆ.

2. **ಸಮುದಾಯ ಶಿಬಿರಗಳು:**

   ಸಾರ್ವಜನಿಕ ಸಂಘ-ಸಂಸ್ಥೆಗಳು, ಆಸ್ಪತ್ರೆಗಳು 10 ದಿನಗಳ ಮದ್ಯವರ್ಜನ ಶಿಬಿರಗಳನ್ನು ನಡೆಸುತ್ತವೆ. ಮದ್ಯವ್ಯಸನದ ರೋಗಕ್ಕೆ ಬಲಿಯಾದವರಿಗೆ ವೈದ್ಯರು, ಸಮಾಜಕಾರ್ಯಕರ್ತರ, ಆಪ್ತಸಮಾಲೋಚಕ ಮತ್ತು ಶುಶ್ರೂಷಕಿಯರ ತಂಡದವರು ಔಷಧಿಗಳ ಮೂಲಕ, ಆಪ್ತ ಸಮಾಲೋಚನೆ, ಯೋಗ, ಧ್ಯಾನ, ಮನೋರಂಜನೆಗಳ ಮೂಲಕ ಚಿಕಿತ್ಸೆಯನ್ನು ನೀಡಿರುತ್ತಾರೆ. ಕರ್ನಾಟಕ ರಾಜ್ಯದಲ್ಲಿ ಶ್ರೀ ಕ್ಷೇತ್ರ ಧರ್ಮಸ್ಥಳ ಪ್ರಾಯೋಜಿತ ಜನಜಾಗೃತಿ ವೇದಿಕೆಗಳು ಇಂತಹ ಅನೇಕ ಶಿಬಿರಗಳನ್ನು ಮಾಡಿ ಅದೆಷ್ಟೋ ಕುಡುಕರಿಗೆ ಮದ್ಯವ್ಯಸನದಿಂ ವಿಮುಕ್ತಿ ಹೊಂದಲು ಸಹಾಯ ಮಾಡಿರುತ್ತಾರೆ.

### 3. ಅನಾಮಿಕ ಅಮಲಿಗಳ ಗುಂಪು (ಆಲ್ಕೋಹಾಲಿಕ್ಸ್ ಅನಾನಿಮಸ್)

ಆಲ್ಕೋಹಾಲಿಕ್ ಅನಾನಿಮಸ್ 1936ರಲ್ಲಿ ಅಮೇರಿಕಾದ ಇಬ್ಬರು ಕುಡಿತ ರೋಗಿಗಳು ಒಂದೆಡೆ ಸೇರಿ ತಮ್ಮ ವ್ಯಸನದ ಜೀವನದ ದುರಂತದ ಬಗ್ಗೆ ಪರಸ್ಪರ ಹೇಳಿಕೊಂಡಾಗ ಇದು ಜನ್ಮ ತಳೆಯಿತು. ಇದು ಪ್ರಪಂಚದ ಎಲ್ಲಾ ಕಡೆ ಶಾಖೆಗಳನ್ನು ಹೊಂದಿದೆ. ಇದರಲ್ಲಿ ಕುಡಿತ ಬಿಟ್ಟವರು ಆಗಾಗ ಒಂದೆಡೆ ಸೇರುತ್ತಾರೆ, ಪ್ರಾರ್ಥಿಸುತ್ತಾರೆ. ಈ ಅನಾಮಿಕ ಅಮಲಿಗಳು ತಾವು ಕುಡಿತದ ರೋಗಕ್ಕೆ ಬಲಿಯಾಗಿ ಎದುರಿಸಿದ ಸಮಸ್ಯೆಗಳು ಮತ್ತು ಅದರಿಂದ ಹೊರಬಂದುದರಬಗ್ಗೆ ಹಾಗೂ ನೆಮ್ಮದಿಯ ಜೀವನವನ್ನು ನಡೆಸುವುದರ ಕುರಿತು ಈಗಾಗಲೇ ಮದ್ಯವ್ಯಸನಕ್ಕೆ ಬಲಿಯಾದವರ ಜೊತೆ ಹಂಚಿಕೊಳ್ಳುತ್ತಾರೆ. ಅಲ್ಲದೇ ಇವರು ಮದ್ಯವ್ಯಸನಿಗಳಿಗೆ ರೋಗದಿಂದ ಹೇಗೆ ಹೊರಬರಬೇಕೆಂದು ಸಲಹೆ ನೀಡುತ್ತಾರೆ. ಇದರಿಂದಾಗಿ ಪ್ರಭಾವಿತರಾಗಿ ಮದ್ಯವ್ಯಸನ ರೋಗದಿಂದ ಮುಕ್ತಿ ಹೊಂದಲು ಪ್ರಯತ್ನಿಸುತ್ತಾರೆ.

### 4. ಇತರೇ ಚಿಕಿತ್ಸಾ ಕ್ರಮಗಳು:

ದೇವರ ಹೆಸರಿನಲ್ಲಿ ಅಕ್ಕಿ ಕಾಳು ನೀಡುವುದು, ಇದು ಇಂದಿಗೂ ದಿವಂಗತ ಬಾಬಣ್ಣನವರ ಸ್ಮರಣಾರ್ಥವಾಗಿ ಹೊಸ್ಮಾರುವಿನಲ್ಲಿ ನಡೆಯುತ್ತಿದೆ. ನೀರು ಮಂತ್ರಿಸಿ ಕೊಡುವುದು, ಭಸ್ಮ ನೀಡುವುದು, ದೇವರ ಮೇಲೆ ಆಣೆ ಮಾಡುವುದು ಇತ್ಯಾದಿ ಚಿಕಿತ್ಸಾ ವಿಧಾನಗಳು ಇಂದಿಗೂ ಚಾಲ್ತಿಯಲ್ಲಿದೆ.

ಕುಡಿತವನ್ನು ಬಿಡಲು ಒಂದು ನಿರ್ಧಿಷ್ಟ ಔಷಧಿ, ಮಾತ್ರೆಗಳಿಲ್ಲ. ವ್ಯಸನಿಗೆ ತಿಳಿಯದಂತೆಯೂ ಔಷಧಿ ನೀಡಿ ಮದ್ಯ ಬಿಡಿಸಲು ಸಾಧ್ಯವೇ ಇಲ್ಲ. ಒಂದು ವೇಳೆ ಇಂತಹ ಪ್ರಯತ್ನ ನಡೆಸಿದರೆ ಇದರಿಂದ ಅಪಾಯವಾಗಬಹುದು. ವ್ಯಸನವೊಂದು ದೈಹಿಕ, ಮಾನಸಿಕ, ಕೌಟುಂಬಿಕ, ಸಾಮಾಜಿಕ ನೆಲೆಯಲ್ಲಿ ಬೆಳೆದುಕೊಂಡು ಹೋಗುವ, ಎಂದಿಗೂ ಗುಣವಾಗದ ಮಾರಣಾಂತಿಕ ರೋಗವಾದ ಕಾರಣ 'ಹೇಗೆ ಕಾಯಿಲೆಯೋ ಅಂತೆಯೇ ಚಿಕಿತ್ಸೆ'ಯೆಂಬ ಮಾತಿನಂತೆ ಸ್ಪಂದಿಸಬೇಕಾಗುತ್ತದೆ. ಮದ್ಯ ವ್ಯಸನಿಯ ಚಿಕಿತ್ಸೆಯಲ್ಲಿ ಮನೆಯವರು, ವೈದ್ಯರು, ಸಲಹೆಗಾರರು, ಸಾಮಾಜಿಕ ಕಾರ್ಯಕರ್ತರು ಪ್ರಮುಖ ಪಾತ್ರ ವಹಿಸಬೇಕಾಗುತ್ತದೆ. ಮೊದಲನೆಯದಾಗಿ,

- **ಮನೆಯವರಿಗೆ ಮನವರಿಕೆ ಮಾಡುವುದು:** ಮದ್ಯವ್ಯಸನಿಯ ಕುರಿತಾದ ಎಲ್ಲಾ ವಿಚಾರಗಳನ್ನು ಪಡೆದು ಚಿಕಿತ್ಸೆಗೆ ಪೂರಕವಾಗುವಂತೆ ಮನೆಯವರ ಜವಾಬ್ದಾರಿಯೇನೆಂಬುದರ ತಿಳುವಳಿಕೆ ನೀಡಬೇಕು. ಈಗಾಗಲೇ ಕುಡಿತದ ಪ್ರಭಾವದಿಂದ ವ್ಯಸನಿಯ ಮನೆಯಲ್ಲಿ ಆವರಿಸಿದ ಎಲ್ಲಾ ಕಷ್ಟ – ನಷ್ಟಗಳ ವಿವರಗಳನ್ನು ಪಡೆದು ಮನೆಯವರಿಗೆ ಧೈರ್ಯ ತುಂಬಬೇಕು.

- **ಮದ್ಯವ್ಯಸನಿಯ ತೀರ್ಮಾನ:** ಚಿಕಿತ್ಸೆಗೆಂದು ಬಂದ ವ್ಯಸನಿಗೆ ಪ್ರಥಮ ಹಂತದಲ್ಲಿ ಅನುಭವವಾಗುವುದು ಅವನ ಕುಡಿತದ ಕೊರತೆ. ಕುಡಿಯಲು ಸಿಗಲಿಲ್ಲವಲ್ಲ, ಇನ್ನು ಕುಡಿಯಲು ಇಲ್ಲವಲ್ಲ ಎನ್ನುವ ಭೀತಿ. ಎರಡನೆಯದಾಗಿ ಚಿಕಿತ್ಸೆಗೆ ಸ್ಪಂದನೆ ನೀಡಲು, ಕುಡಿತ ಬಿಡುವ ತೀರ್ಮಾನ ಕೈಗೊಳ್ಳಲು ಪ್ರೇರಣೆ ತುಂಬುವ ಕೆಲಸವನ್ನು ಸಲಹೆಗಾರರು ಮಾಡಬೇಕಾಗುತ್ತದೆ.

- **ಹಿಂತೆಗೆತದ ಚಿಹ್ನೆಗಳ ನಿರ್ವಹಣೆ:** ಮದ್ಯಪಾನಕ್ಕೆ ಅವಲಂಬನೆಯಾದ ದೇಹವನ್ನು ಪಾನದಿಂದ ದೂರವಿರಿಸಿದಾಗ ಮೈಕೈ ನಡುಕ, ನಿದ್ರಾಹೀನತೆ, ಸಿಟ್ಟು ಬರುವಿಕೆ... ಮುಂತಾದ ವಿಚಿತ್ರ ಪರಿಣಾಮಗಳು ಕಂಡುಬರುತ್ತದೆ. ಮದ್ಯಪಾನವನ್ನು ದೇಹದಿಂದ ಹೊರಹಾಕುವ ಮನೋರೋಗ ವೈದ್ಯರ ಮೂಲಕ ನೀಡುವ ಡಿಟಾಕ್ಸಿಫಿಕೇಶನ್ ಚಿಕಿತ್ಸೆ ಇಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತದೆ. ಈ ಹಂತದಲ್ಲಿ ರೋಗಿಯ ಶಾರೀರಿಕ ಮತ್ತು ಮಾನಸಿಕ ಚಿಹ್ನೆಗಳನ್ನು ಗಮನಿಸಿ ಚಿಕಿತ್ಸೆ ನೀಡಬೇಕು. ಈ ಸಂದರ್ಭದಲ್ಲಿ ಕೆಲವೊಮ್ಮೆ ಭ್ರಮೆಗಳು ಬಂದರೆ ಚಿಕಿತ್ಸೆಯನ್ನು 15 ದಿನಗಳವರೆಗೂ ಮುಂದುವರಿಸಬೇಕಾಗುತ್ತದೆ.

- **ದೈಹಿಕ ಚಿಕಿತ್ಸೆ:** $C_2H_5OH$ ರಾಸಾಯನಿಕ ರಾಸಾಯನಿಕ ಸೂತ್ರವುಳ್ಳ ಈಥೈಲ್/ಮಿಥೈಲ್/ಆಲ್ಕೋಹಾಲ್ (ಮದ್ಯಪಾನ) ನಿಧಾನವಾಗಿ ಕೊಲ್ಲುವ ವಿಷವಾಗಿದೆ. ಯಾವುದೇ ಪ್ರೋಟೀನ್, ಜೀವಸತ್ವ, ಜೀವಸಾರವಿಲ್ಲದ ಈ ವಿಷಪಾನವನ್ನು ಹಲವಾರು ವರ್ಷದಿಂದ ಸೇವನೆ ಮಾಡಿದ ವ್ಯಸನಿಗಳು ತನ್ನ ದೈಹಿಕ ಸಾಮರ್ಥ್ಯವನ್ನು ಸ್ವಾಭಾವಿಕವಾಗಿ ಕಳೆದುಕೊಳ್ಳುತ್ತಾರೆ. ದೈಹಿಕ ರೋಗ ತಜ್ಞರುಗಳಿಂದ

ಚಿಕಿತ್ಸೆಗೊಳಪಡಿಸಿ ನಿದ್ದೆ, ಹಸಿವು, ಧೈರ್ಯ, ಶಕ್ತಿ ಭರಿಸುವ ಔಷಧಿಗಳನ್ನು ನೀಡಿ ರೋಗಿಗಳಲ್ಲಿ ನವ ಚೈತನ್ಯ ತುಂಬಬೇಕಾಗುತ್ತದೆ.

- **ಮಾನಸಿಕ ಚಿಕಿತ್ಸೆ:** ಮಾನಸಿಕ ಸಮಸ್ಯೆಗಳಾದ ಒಂಟಿತನ, ಸಂಶಯ, ಜಿಗುಪ್ಸೆ, ಭಯ, ನಿರಾಸೆ... ಈ ಮುಂತಾದ ಪ್ರಲೋಭನೆಗಳಿಗೆ ಮನೋರೋಗ ತಜ್ಞರ ಮೂಲಕ ಮಾನಸಿಕ ಚಿಕಿತ್ಸೆ ನೀಡಬೇಕು. ಕೇಂದ್ರ ನರಮಂಡಲಕ್ಕೆ ಆದಂತಹ ಹಾನಿಗಳನ್ನು ಸೂಕ್ತೌಷಧಿಗಳ ಮೂಲಕ ನಿವಾರಣೆ ಮಾಡಬೇಕು. ರೋಗಿಗಳ ಚಿಂತನೆಗಳಿಗೆ ಸ್ಪಂದಿಸಿ ಸಲಹೆಗಾರರಿಂದ ಆಪ್ರ ಸಲಹೆ, ಮಾರ್ಗದರ್ಶನ ಒದಗಿಸಬೇಕು.

- **ಕುಟುಂಬದವರಿಗೆ ಚಿಕಿತ್ಸೆ:** ಮದ್ಯಪಾನದ ತೀವ್ರ ಚಟವಿರುವ ವ್ಯಕ್ತಿಗಳ ನಡವಳಿಕೆಯಿಂದಾಗಿ ಕುಟುಂಬದ ಸದಸ್ಯರ ಸಂಬಂಧ ತೀರ ಹದಗೆಟ್ಟಿರುತ್ತದೆ. ಈ ಸಂಬಂಧ ಸರಿಯಾಗೆ ಚಿಕಿತ್ಸೆ ಫಲಕಾರಿಯಾಗುವುದಿಲ್ಲ. ಮಡದಿ, ಮಕ್ಕಳು, ತಂದೆ, ತಾಯಿ... ಹೀಗೆ ವ್ಯಸನಿಗಳ ಜೊತೆಯಲ್ಲಿರುವವರಿಗೂ ಕೌಟುಂಬಿಕ ಸಹ ಚಿಕಿತ್ಸೆಯನ್ನು ನೀಡಿ ಕೌಟುಂಬಿಕ ಭಿನ್ನಾಭಿಪ್ರಾಯಗಳನ್ನು ಬಗೆಹರಿಸುವ ವ್ಯವಸ್ಥೆಯನ್ನು ಮನೋಶಾಸ್ತ್ರಜ್ಞರು ಕಲ್ಪಿಸಬೇಕಾಗುತ್ತದೆ.

- **ನಡವಳಿಕೆಯ ಚಿಕಿತ್ಸೆ:** ಮದ್ಯವ್ಯಸನ ನಡವಳಿಕೆಯ ದೋಷವಾಗಿದೆ. ಕ್ಷುಲ್ಲಕ ಕಾರಣಕ್ಕೂ ಆತಂಕಗೊಳ್ಳುವ ವ್ಯಸನಿಯ ಭಾವನೆಯನ್ನು ಸರಿಪಡಿಸುವ ರಿಲಾಕ್ಷೇಶನ್ ಚಿಕಿತ್ಸೆಯನ್ನು ನೀಡಿ ತಾಳ್ಮೆ.. ಕ್ಷಮೆ, ವಿನಯತೆಯಿಂದ ಬದುಕುವ ದಾರಿಯನ್ನು ಮನೋಶಾಸ್ತ್ರಜ್ಞರು ಕಲಿಸಬೇಕಾಗುತ್ತದೆ.

- **ಆಧ್ಯಾತ್ಮಿಕ ಚಿಕಿತ್ಸೆ:** ದುಶ್ಚಟವೆಂಬ ದುರ್ನಡತೆಯನ್ನು ಬಿಡಲು ಭಕ್ತಿ ಮಾರ್ಗವನ್ನು ಬೋಧಿಸುವುದು ಅತ್ಯಗತ್ಯ. ಭಕ್ತಿ ಹುಟ್ಟಿಸುವಂತೆ ಮಾಡಲು ಭಜನೆ ಶ್ಲೋಕಗಳನ್ನು ಪರಿಚಯಿಸುವ ಅನಿವಾರ್ಯ ಚಿಕಿತ್ಸೆಯೇ ಇದಾಗಿದೆ. ಭಜನಾ ಮಂಡಳಿಗಳು, ಧಾರ್ಮಿಕ ಮುಖಂಡರು, ಆಧ್ಯಾತ್ಮಿಕ ಚಿಂತಕರ ಮೂಲಕ ಈ ಚಿಕಿತ್ಸೆಯನ್ನು ನೀಡಬೇಕಾಗುತ್ತದೆ. ಆತ್ಮ ನಿವೇಧನೆಯ ದಾರಿಯನ್ನು ತೋರಿಸಿ ಆತ್ಮಾವಲೋಕನ ಮಾಡಿ ಪಶ್ಚಾತ್ತಾಪ ಪಡುವಂತೆ ವ್ಯವಸ್ಥೆಯನ್ನು ಕಲ್ಪಿಸಬೇಕು. ಮಹಾತ್ಮ

ಗಾಂಧೀಜಿಯವರಯ ಭೋಧಿಸಿದಂತೆ 'ಕುಡುಕನ ಅಂತರಂಗವನ್ನು ಭೇಧಿಸದ ಹೊರತು ಅವನನ್ನು ಮದ್ಯಪಾನ ಮುಕ್ತರನ್ನಾಗಿಸುವ ಕನಸು ನನಸಾಗದು' ಈ ನಿಟ್ಟಿನಲ್ಲ ಆಧ್ಯಾತ್ಮಿಕ ಚಿಕಿತ್ಸೆ ಬಹಳ ಪ್ರಮುಖ ಪಾತ್ರವನ್ನು ವಹಿಸುತ್ತದೆ.

**ಗುಂಪು ಚಿಕಿತ್ಸೆ:** ಹತ್ತು ಜನರ ಮಧ್ಯೆ ಕಲಿತ ಈ ದುಶ್ಚಟವನ್ನು ಹತ್ತಾರು ವ್ಯಸನಿಗಳ ಜೊತೆಯಲ್ಲೇ ಬಿಡಿಸುವ ವ್ಯವಸ್ಥೆ ಬಹಳ ಪರಿಣಾಮಕಾರಿಯಾಗಿದೆ. ಚಿಕಿತ್ಸಾ ಸಮಯದಲ್ಲಿ ರೋಗಿಗೆ ವ್ಯಕ್ತಿ ವ್ಯಕ್ತಿಗಳ ಮಧ್ಯೆ ಚರ್ಚೆ, ಗುಂಪು ಚಟುವಟಿಕೆ, ಗುಂಪು ಸಲಹೆಗಳನ್ನು ನಡೆಸಿ ಜೀವನದ ಅನಿಸಿಕೆ ಹೇಳುವಂತೆ ಪ್ರೇರಣೆ ನೀಡುವುದು. ಆಟೋಟ ಸ್ಪರ್ಧೆಗಳನ್ನು ಏರ್ಪಡಿಸಿ ಸವಾಲು ಸ್ವೀಕರಿಸಲು, ಸೋಲು ಒಪ್ಪಲು ಅವಕಾಶ ನೀಡಬೇಕು. ಚಿಕಿತ್ಸಾ ಸಮಯದಲ್ಲಿ ಒಬ್ಬ ಮತ್ತೊಬ್ಬರ ಸಮಸ್ಯೆಗಳ ವಿಮರ್ಷೆ ಹಾಗೂ ಕಷ್ಟಗಳನ್ನು ನೋಡಲು ಈ ಗುಂಪು ಚಿಕಿತ್ಸೆ ಅವಕಾಶ ನೀಡುತ್ತದೆ. ಪಾನಮುಕ್ತರ ಮೂಲಕ ಅನುಭವ, ಬಲ, ಭರವಸೆ ಬರುವಂತೆ ವ್ಯವಸ್ಥೆ ಮಾಡುವುದು. ಈ ಮುಂತಾದ ಕ್ರಮಗಳಿಂದ ವ್ಯಸನಿಗೆ ಆತ್ಮ ಸಂಯಮ, ಕುಡಿತ ಬಿಟ್ಟು ಬಾಳಬಹುದೆಂಬ ಧೈರ್ಯ ಸ್ವಾಭಾವಿಕವಾಗಿ ಮೂಡಿ ಬರುತ್ತದೆ. ಚಿಕಿತ್ಸೆಯ ಬಳಿಕ ಪಾನಮುಕ್ತರ ಸಂಘಟನೆಯೊಳಗೆ ಸೇರಿಕೊಳ್ಳಲು ಸೂಕ್ತ ಮಾರ್ಗದರ್ಶನವನ್ನು ವ್ಯಸನಿಗೆ ಮತ್ತು ಮನೆಯವರಿಗೆ ನೀಡಬೇಕು.

- **ಸಾಮಾಜಿಕ ಚಿಕಿತ್ಸೆ:** ಸಾಮಾಜಿಕವಾಗಿ ಕಳೆದುಕೊಂಡ ಸ್ಥಾನಮಾನವನ್ನು ಪುನರಪಿ ಪಡೆಯಲು ಪೂರಕವಾದ ಮಾರ್ಗದರ್ಶನವನ್ನು ಚಿಕಿತ್ಸಾ ಸಮಯದಲ್ಲಿ ನೀಡಬೇಕಾಗುತ್ತದೆ. ಸಮಾಜದ ಗಣ್ಯರ, ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಸಾಮಾಜಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಪ್ರೇರಣೆ ನೀಡಬೇಕು. ಮದ್ಯವ್ಯಸನಿಯು ಹಾಕಿಕೊಂಡಿರುವ ಯೋಜನೆಗಳಿಗೆ ಸಾಮಾಜಿಕ ಸಹಕಾರ ಸಿಗುವಂತೆ ಸೂಕ್ತ ಮಾರ್ಗದರ್ಶನ ಲಭಿಸಿದಾಗ ರೋಗಿ ಚೇತರಿಸುವಲ್ಲಿ ಸಂಶಯವಿಲ್ಲ.

- **ಮನಃ ಕುಡಿತಕ್ಕೆ ಬಲಿಯಾಗದಂತೆ ಮಾರ್ಗದರ್ಶನ:** ಮನುಷ್ಯನಲ್ಲಿರಬೇಕಾದ ವೈಯುಕ್ತಿಕ, ಕೌಟುಂಬಿಕ, ಸಾಮಾಜಿಕ, ಔದ್ಯೋಗಿಕ, ಆತ್ಮಿಕ ಜವಾಬ್ದಾರಿಗಳನ್ನು ವಿವರಿಸುವುದೇ ಅತೀ ಮುಖ್ಯವಾದ ಕೆಲಸ. ಮುಖ್ಯವಾಗಿ ಪರಿವರ್ತಿತ ಜೀವನಕ್ಕೆ ಪೂರಕವಾದ ಕಾಲಕ್ರಮಾನುಪಟ್ಟಿ, ಜೀವನ ಕೌಶಲಗಳು, ಸಂದಾನ ಕೌಶಲಗಳು, ಸೃಜನಾತ್ಮಕ ಚಿಂತನೆ, ವಿಮರ್ಷಾತ್ಮಕ ಚಿಂತನೆ, ಪರಿಣಾಮಕಾರಿ ಸಂವಹನ, ವ್ಯಕ್ತಿ ವ್ಯಕ್ತಿ ಸಂಬಂಧಿ ಕೌಶಲಗಳು, ಪರಾನುಭೂತಿ, ಭಾವೋದ್ವೇಗ ಮತ್ತು ಒತ್ತಡಗಳ ನಿರ್ವಹಣೆ, ಸ್ವಪ್ರಜ್ಞೆ, ಆತ್ಮಗೌರವ, ಉದ್ಯೋಗ ಮಾರ್ಗದರ್ಶನ, ಮಾನಸಿಕ ಒತ್ತಡ ನಿರ್ವಹಣೆ, ಮನೋಭಾವ ಮತ್ತು ವೈಯುಕ್ತಿಕ ವರ್ತನೆಗಳು, ನಿರ್ಧಾರಗಳನ್ನು ಕೈಗೊಳ್ಳುವುದು, ಉತ್ತಮಚಟುವಟಿಕೆಗಳನ್ನು ವಿವರಿಸುವುದರ ಮೂಲಕ ಶಾಶ್ವತ ಪಾನಮುಕ್ತ ಜೀವನದಲ್ಲಿರಲು ಮನೋಶಾಸ್ತ್ರಜ್ಞರು ಮಾರ್ಗದರ್ಶನ ನೀಡಬೇಕಾಗುತ್ತದೆ.

**ಪರಿಸರ ಚಿಕಿತ್ಸೆ:** ಯೋಗ, ಧ್ಯಾನ, ವ್ಯಾಯಾಮ, ಚಿಂತನೆಗಳ ಪರಿಚಯವನ್ನು ಚಿಕಿತ್ಸಾ ಸಮಯದಲ್ಲಿ ನೀಡುವುದು ಅತ್ಯಾವಶ್ಯಕವಾಗಿದೆ. ಈ ಕಾರ್ಯಕ್ರಮವನ್ನು ಜೀವನದುದ್ದಕ್ಕೂ ಪಾಲಿಸುವಂತೆ ಪ್ರೇರಣೆ ನೀಡುವ ಜವಾಬ್ದಾರಿ ಯೋಗ ಚಿಕಿತ್ಸಕರದ್ದಾಗಿರುತ್ತದೆ. ಉತ್ತಮ ಪೌಷ್ಠಿಕ ಆಹಾರ, ಕ್ರಮಬದ್ಧವಾದ ಜೀವನ ಶೈಲಿಯಿಂದ ಕುಡಿತದ ಹಳೆಯ ಸ್ನೇಹಿತರನ್ನು ತಪ್ಪಿಸಿಕೊಳ್ಳಲು ಪರಿಹಾರವನ್ನು ಪರಿಸರ ಚಿಕಿತ್ಸೆಯಿಂದ ನೀಡಬಹುದಾಗಿದೆ. ಕೃಷಿ, ಉದ್ಯಾನವನ ಮಾಡುವ ಆಸಕ್ತಿಯನ್ನು ತೋರಿಸಿ ದಿನವಿಡೀ ಚಟುವಟಿಕೆಯಿಂದ ಇರಲು ಪರಿಸರ ಚಿಕಿತ್ಸೆಯಲ್ಲಿ ಮಾರ್ಗದರ್ಶನ ನೀಡಬೇಕು.

## <u>ಸಮಸ್ಯೀಕರಣ :-</u>

ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ಇರುವ ಹಲವಾರು ಚಿಕಿತ್ಸಾ ವಿಧಾನಗಳ ಬಗ್ಗೆ ಈಗಾಗಲೇ ಪೀಠಿಕೆಯಲ್ಲಿ ಚರ್ಚಿಸಲಾಗಿದೆ. ಮದ್ಯವ್ಯಸನದ ವಿಮುಕ್ತಿಯ ಪ್ರಕ್ರಿಯೆಯಲ್ಲಿ ವೈದ್ಯಕೀಯ, ಸಾಮಾಜಿಕ ಚಿಕಿತ್ಸೆ ಮತ್ತು ಸಮುದಾಯ ಶಿಬಿರಗಳು ಬಹಳ ಪ್ರಮುಖ ಪಾತ್ರ

ವಹಿಸುತ್ತವೆ. ಅಲ್ಲದೇ ಅನಾಮಿಕ ಅಮಲಿಗಳ ಪ್ರಯತ್ನ, ಧಾರ್ಮಿಕ ನಂಬಿಕೆಗಳು ಕೂಡ ವಿಮುಕ್ತಿಯ ಪ್ರಕ್ರಿಯೆಯಲ್ಲಿ ಒಳಗೊಂಡಿದೆ. ಈ ನಿಟ್ಟಿನಲ್ಲಿ ಬೇರೆ ಬೇರೆ ಚಿಕಿತ್ಸಾ ವಿಧಾನಗಳ ಸ್ವರೂಪ, ಅಳವಡಿಕೆಯ ಕ್ರಮ ಮತ್ತು ಇದರ ಪರಿಣಾಮಗಳ ಕುರಿತು ಅಧ್ಯಯನ ನಡೆಸುವ ಸಲುವಾಗಿ "ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳು" ಎಂಬ ವಿಷಯವನ್ನು ಸಂಶೋಧನೆಗಾಗಿ ಆಯ್ಕೆ ಮಾಡಲಾಗಿದೆ. ಅಧ್ಯಯನಕ್ಕಾಗಿ ಉಡುಪಿ ತಾಲೂಕನ್ನು ಆರಿಸಲಾಗಿದೆ.

## ಅಧ್ಯಯನದ ಉದ್ದೇಶಗಳು:-

1. ಮದ್ಯವ್ಯಸನದ ಸಮಸ್ಯೆಯನ್ನು ಪರಿಶೀಲಿಸುವುದು.
2. ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳ ಬಗ್ಗೆ ಅಧ್ಯಯನ ನಡೆಸುವುದು.
3. ಚಿಕಿತ್ಸಾ ವಿಧಾನಗಳ ಪರಿಣಾಮಗಳನ್ನು ಪರಿಶೀಲಿಸುವುದು.

## ಅಧ್ಯಯನದ ಊಹೆಗಳು:-

ಅಧ್ಯಯನಕ್ಕಾಗಿ ಈ ಕೆಳಗಿನ ಊಹೆಗಳನ್ನು ರಚಿಸಲಾಗಿದೆ.

1. ಮದ್ಯವ್ಯಸನಿಗಳಿಗೆ ಸರಿಯಾದ ಸಮಯದಲ್ಲಿ ಸೂಕ್ತ ಚಿಕಿತ್ಸೆ ನೀಡಿದರೆ ಅವರು ವಿಮುಕ್ತಿ ಹೊಂದುತ್ತಾರೆ.
2. ಮದ್ಯವ್ಯಸನದ ಸಮಸ್ಯೆಯ ಪರಿಹಾರದಲ್ಲಿ ಬರೇ ವೈದ್ಯಕೀಯ ಚಿಕಿತ್ಸೆಯಿಂದ ವಿಮುಕ್ತಿ ಹೊಂದಲು ಸಾಧ್ಯವಿಲ್ಲ. ಜೊತೆಗೆ ಇತರ ಚಿಕಿತ್ಸಾ ವಿಧಾನಗಳನ್ನು ಅಳವಡಿಸಿಕೊಳ್ಳಬೇಕು.
3. ಮದ್ಯವ್ಯಸನ ವಿಮುಕ್ತಿ ಹೊಂದುವಲ್ಲಿ ಧಾರ್ಮಿಕ ನಂಬಿಕೆಗಳು ಪ್ರಭಾವ ಬೀರುತ್ತವೆ.
4. ಮದ್ಯವ್ಯಸನ ವಿಮುಕ್ತಿಯ ಪ್ರಕ್ರಿಯೆಯಲ್ಲಿ ಈಗಾಗಲೇ ವಿಮುಕ್ತಿ ಹೊಂದಿದ ಮದ್ಯವ್ಯಸನಿಗಳು ಪ್ರಮುಖ ಪಾತ್ರ ವಹಿಸುತ್ತಾರೆ.
5. ಮದ್ಯವ್ಯಸನ ವಿಮುಕ್ತಿಗೆ ಸಂಬಂಧಿಸಿದ ಚಿಕಿತ್ಸೆಗಳ ನಂತರ ಮೇಲ್ವಿಚಾರಣೆ ಅನುಸರಿಸುವಿಕೆ ಕಡಿಮೆಯಾದಲ್ಲಿ ಚಿಕಿತ್ಸಾ ವಿಧಾನಗಳು ಫಲಕಾರಿಯಾಗುವುದಿಲ್ಲ.

## ಅಧ್ಯಯನದ ಪ್ರಾಮುಖ್ಯತೆ:

1. ಪ್ರಸ್ತುತ ಅಧ್ಯಯನ ಮುಂದಿನ ಅಧ್ಯಯನಕ್ಕೆ ಪ್ರಯೋಜನಕಾರಿಯಾಗಬಲ್ಲದು.
2. ಈ ಅಧ್ಯಯನದಿಂದ ಬರುವ ಫಲಿತಾಂಶಗಳು ಸರಕಾರ ಮತ್ತು ಸರಕಾರೇತರ ಸಂಸ್ಥೆಗಳಿಗೆ ಕಾರ್ಯಕ್ರಮ ಅಳವಡಿಸುವ ಸಂದರ್ಭದಲ್ಲಿ ಸಹಕಾರಿಯಾಗಬಹುದು.
3. ಈ ಅಧ್ಯಯನದಿಂದ ಕಂಡು ಬಂದಂತಹ ಫಲಿತಾಂಶಗಳು ಸಮಾಜಶಾಸ್ತ್ರ, ಮನಃಶಾಸ್ತ್ರ, ವೈದ್ಯಕೀಯ ಸಮಾಜಶಾಸ್ತ್ರ, ವೈದ್ಯಕೀಯ ಮನಃಶಾಸ್ತ್ರ, ಅಭಿವೃದ್ಧಿ ಅಧ್ಯಯನ, ವೈದ್ಯಕೀಯ ಸಮಾಜಕಾರ್ಯ ಮತ್ತು ಇತರೇ ಸಂಬಂಧಪಟ್ಟ ಸಮಾಜ ವಿಜ್ಞಾನ ವಿಷಯಗಳಿಗೆ ಕೊಡುಗೆ ನೀಡಬಲ್ಲದು.

## ಅಧ್ಯಯನದ ವಿಧಾನಗಳು:-

ಅಧ್ಯಯನದ ಉದ್ದೇಶಗಳು ಮತ್ತು ಊಹೆಗಳ ಆಧಾರದಲ್ಲಿ ಪ್ರಶ್ನಾವಳಿಯನ್ನು ರಚಿಸಲಾಗುವುದು. ಉಡುಪಿ ತಾಲೂಕಿನಲ್ಲಿ ಈಗಾಗಲೇ ಮದ್ಯವ್ಯಸನ ವಿಮುಕ್ತಿ ಚಿಕಿತ್ಸಾ ವಿಧಾನಗಳ ಮೂಲಕ ಮದ್ಯವ್ಯಸನದಿಂದ ವಿಮುಕ್ತರಾಗಿರುವ ಸುಮಾರು 35 ಮಾಹಿತಿದಾರರನ್ನು ಅನುಷಂಗಿಕ ಮೂಲಗಳ ಮನೆ ಭೇಟಿ ಮಾಡಿ ಸಂದರ್ಶನ ಮತ್ತು ಅವಲೋಕನಗಳ ಮುಖಾಂತರ ಮಾಹಿತಿ ಸಂಗ್ರಹಿಸಲಾಗುವುದು. ದ್ವಿತೀಯ ಮೂಲಗಳ ಮೂಲಕ ಬೇರೆ ಬೇರೆ ಚಿಕಿತ್ಸಾ ವಿಧಾನಗಳ ಬಗ್ಗೆ ಮದ್ಯವ್ಯಸನ ರೋಗದಿಂದ ವಿಮುಕ್ತಿ ಹೊಂದಿದವರ ಕುರಿತು ಇತ್ಯಾದಿ ವಿಷಯಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲಾಯಿತು.

1. ಈ ಅಧ್ಯಯನದ ನಮೂನೆಯ ಗಾತ್ರ ಚಿಕ್ಕದಾಗಿದ್ದು, ಆಳವಾದ ಅಧ್ಯಯನಕ್ಕೆ ಅವಕಾಶ ಕಡಿಮೆ ಇರುತ್ತದೆ.
2. ಪ್ರಸ್ತುತ ಅಧ್ಯಯನವು ಉಡುಪಿ ತಾಲೂಕಿಗೆ ಮಾತ್ರ ಸೀಮಿತವಾಗಿದ್ದು, ಇತರ ಜಿಲ್ಲೆ ಅಥವಾ ಪ್ರದೇಶಗಳ ಅಧ್ಯಯನಕ್ಕೆ ಅವಕಾಶವಿರುವುದಿಲ್ಲ.

## ಅಧ್ಯಯನದ ವ್ಯಾಪ್ತಿ ಮತ್ತು ಉಡುಪಿ ಜಿಲ್ಲೆಯ ಸಂಕ್ಷಿಪ್ತ ವಿವರ:

ಕರ್ನಾಟಕ ರಾಜ್ಯದ ಜಿಲ್ಲೆಗಳಲ್ಲಿ ಒಂದಾದ ಉಡುಪಿ ಜಿಲ್ಲೆಯು 1997ರಲ್ಲಿ ಉದಯಿಸಿತು. ದಕ್ಷಿಣ ಕನ್ನಡ ಜಿಲ್ಲೆಯ ಉತ್ತರದ ತಾಲೂಕುಗಳಾದ ಕುಂದಾಪುರ, ಕಾರ್ಕಳ ಮತ್ತು ಉಡುಪಿ ತಾಲೂಕುಗಳನ್ನು ಒಳಗೊಂಡ ಉಡುಪಿ ಜಿಲ್ಲೆಯನ್ನು ರಚಿಸಲಾಗಿದೆ. ಜಿಲ್ಲೆಯ ಉತ್ತರದಲ್ಲಿ ಉತ್ತರ ಕನ್ನಡ ಜಿಲ್ಲೆ, ದಕ್ಷಿಣದಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಪೂರ್ವದಲ್ಲಿ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳು ಮತ್ತು ಪಶ್ಚಿಮದಲ್ಲಿ ಅರಬ್ಬಿ ಸಮುದ್ರವಿದೆ. ಉಡುಪಿ ಜಿಲ್ಲೆ ಹಲವು ರಾಷ್ಟ್ರೀಕೃತ ಬ್ಯಾಂಕು, ಹೋಟೇಲು ಉದ್ಯಮ ಮತ್ತು ದೇಗುಲಗಳ ತವರೂರು.ಉಡುಪಿ, ಮಣಿಪಾಲ ಮತ್ತು ಕಾರ್ಕಳ ತಾಲೂಕಿನ ನಿಟ್ಟೆಗಳು 'ಶಿಕ್ಷಣ ಕಾಶಿ'ಗಳಾಗಿವೆ. 2001ರ ಜನಗಣತಿ ಪ್ರಕಾರ ಇಲ್ಲಿನ ಜನಸಂಖ್ಯೆ 1,112,243 (2011–ಜನಗಣತಿ ಪ್ರಕಾರ 1,177,908). ಕುಂದಾಪುರ, ಕಾರ್ಕಳ, ಕಾಪು, ಬೈಂದೂರು ಮತ್ತು ಉಡುಪಿ ಇಲ್ಲಿನ ವಿಧಾನ ಸಭಾ ಕ್ಷೇತ್ರಗಳಾಗಿವೆ.ಉಡುಪಿ ಜಿಲ್ಲೆಯ ಸಾಕ್ಷರತಾ ಪ್ರಮಾಣ 92%. ಅಕ್ಕಿ ಮತ್ತು ತೆಂಗು ಇಲ್ಲಿನ ಪ್ರಮುಖ ಬೆಳೆಗಳು. ಮೀನುಗಾರಿಕೆ ಇಲ್ಲಿನ ಜನರ ಪ್ರಮುಖ ಉದ್ಯೋಗವಾಗಿದ್ದು, ಒಳನಾಡು ಮತ್ತು ಆಳ ಸಮುದ್ರ ಮೀನುಗಾರಿಕೆ ಮಲ್ಪೆ ಮತ್ತು ಗಂಗೊಳ್ಳಿ ಪ್ರಮುಖ ಮೀನುಗಾರಿಕಾ ಬಂದರುಗಳು.ಉಡುಪಿ ರಾಷ್ಟ್ರೀಕೃತ ಬ್ಯಾಂಕ್‌ಗಳಾದ ಕಾರ್ಪೋರೇಶನ್ ಮತ್ತು ಸಿಂಡಿಕೇಟ್ ಬ್ಯಾಂಕುಗಳ ತವರು ಜಿಲ್ಲೆ. LICಯ ವಿಭಾಗ ಕಛೇರಿ ಉಡುಪಿಯಲ್ಲಿದೆ.ತುಳು, ಕನ್ನಡ ಮತ್ತು ಕೊಂಕಣಿ ಇಲ್ಲಿನ ಜನರ ಪ್ರಮುಖ ಭಾಷೆಗಳಾಗಿವೆ. ಜೊತೆಗೆ ಬ್ಯಾರಿ ಭಾಷೆ ಮತ್ತು ಕುಂದ ಕನ್ನಡ ಕೂಡ ಬಳಕೆಯಲ್ಲಿವೆ.

ಭರತನಾಟ್ಯ, ಯಕ್ಷಗಾನ, ನಾಗಾರಾಧನೆ, ಭೂತ ಕೋಲ ಮತ್ತು ಕೋಳಿ ಅಂಕ ಇಲ್ಲಿನ ಸಂಸ್ಕೃತಿಯ ಭಾಗಗಳು.ರಾಜ್ಯ ಸರ್ಕಾರ ನಡೆಸುವ ಎಸ್ಸೆಸ್ಸೆಲ್ಸಿ ಮತ್ತು ದ್ವಿತೀಯ ಪಿ.ಯು.ಸಿ. ಪರೀಕ್ಷಾ ಫಲಿತಾಂಶದಲ್ಲಿ ಜಿಲ್ಲೆ ಉತ್ತಮ ಸ್ಥತಿ ಕಾಯ್ದುಕೊಂಡಿದೆ. ಮಣಿಪಾಲ ವಿವಿ ಮತ್ತು ನಿಟ್ಟೆ ವಿವಿಗಳು ಜಾಗತಿಕ ಮಟ್ಟದಲ್ಲಿ ಉನ್ನತ ಶಿಕ್ಷಣಕ್ಕೆ ಕೇಂದ್ರಗಳಾಗಿವೆ.ಇಷ್ಟೆಲ್ಲಾ ಮುಂದುವರಿದ ಉಡುಪಿ ಜಿಲ್ಲೆ/ತಾಲೂಕಿನಲ್ಲಿ ಆಧುನೀಕರಣ, ಕೈಗಾರೀಕರಣ, ಜಾಗತೀಕರಣ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವದಿಂದ ಮದ್ಯಪಾನವನ್ನು ಸೇವಿಸುವವರ ಸಂಖ್ಯೆ ವೃದ್ಧಿಯಾಗುತ್ತಿದೆ. ದಿನೇದಿನೇ ಮದ್ಯವ್ಯಸನಿಗಳ ಪ್ರಮಾಣ ಕೂಡ ಹೆಚ್ಚಾಗುತ್ತಿದ್ದು ಮದ್ಯಪಾನವು ಸಾಮಾಜಿಕ ಸಮಸ್ಯೆಯಾಗಿ ಕಾಡುತ್ತಿದೆ. ಈ ನಿಟ್ಟಿನಲ್ಲಿ ಸಂಶೋಧಕನು ಮದ್ಯವ್ಯಸನ

ಸಮಸ್ಯೆಗಳು,ಮದ್ಯವ್ಯಸನ ವಿಮುಕ್ತಿ ಚಿಕಿತ್ಸಾ ವಿಧಾನಗಳು ಮತ್ತು ಚಿಕಿತ್ಸಾ ವಿಧಾನಗಳ ಪರಿಣಾಮಗಳ ಬಗ್ಗೆ ಅಧ್ಯಯನ ನಡೆಸುವ ನಿಟ್ಟಿನಲ್ಲಿ ಸಂಶೋಧನೆಯನ್ನು ಕೈಗೆತ್ತಿಕೊಳ್ಳಲಾಗಿದೆ.

## <u>ಉಡುಪಿ ಜಿಲ್ಲೆಯ ನಕಾಶೆ</u>



## ಅಧ್ಯಯನದ ಮಿತಿಗಳು:-

1. ಈ ಅಧ್ಯಯನದ ನಮೂನೆಯ ಗಾತ್ರ ಚಿಕ್ಕದಾಗಿದ್ದು, ಆಳವಾದ ಅಧ್ಯಯನಕ್ಕೆ ಅವಕಾಶ ಕಡಿಮೆ ಇರುತ್ತದೆ.
2. ಪ್ರಸ್ತುತ ಅಧ್ಯಯನವು ಉಡುಪಿ ತಾಲೂಕಿಗೆ ಮಾತ್ರ ಸೀಮಿತವಾಗಿದ್ದು, ಇತರ ಜಿಲ್ಲೆ ಅಥವಾ ಪ್ರದೇಶಗಳ ಅಧ್ಯಯನಕ್ಕೆ ಅವಕಾಶವಿರುವುದಿಲ್ಲ.

## ಅಧ್ಯಯನದ ರೂಪುರೇಷೆಗಳು (ಅಧ್ಯಾಯಗಳು)

ಅಧ್ಯಾಯ ೧ : ಪೀಠಿಕೆ

ಅಧ್ಯಾಯ ೨ : ಸೂಚನದಾರರ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ (ಮಾಹಿತಿ ವಿಶ್ಲೇಷಣೆ)

ಅಧ್ಯಾಯ ೩ : ಮದ್ಯವ್ಯಸನದ ಸಮಸ್ಯೆಗಳು (ಮಾಹಿತಿ ವಿಶ್ಲೇಷಣೆ)

ಅಧ್ಯಾಯ ೪ : ಮದ್ಯವ್ಯಸನ ವಿಮುಕ್ತಿ ಚಿಕಿತ್ಸಾ ವಿಧಾನಗಳು ಮತ್ತು ಪರಿಣಾಮಗಳು (ಮಾಹಿತಿ ವಿಶ್ಲೇಷಣೆ)

ಅಧ್ಯಾಯ ೫ : ಸಾರಾಂಶ, ಉಪ ಸಂಹಾರ ಮತ್ತು ಸಲಹೆಗಳು

: ಪರಾಮರ್ಶನ ಗ್ರಂಥಗಳು

: ಅನುಬಂಧಗಳು

: ಭಾವಚಿತ್ರಗಳು

## ಸಾಹಿತ್ಯ ವಿಮರ್ಶೆ

ಡಾ। ಡಿ. ವೀರೇಂದ್ರ ಹೆಗ್ಗಡೆಯವರು ಹೇಳುವಂತೆ "ಇವನಲ್ಲಿ 'ಪರ-ಆತ್ಮ' (ಪರಮಾತ್ಮ!)ನ ಪ್ರವೇಶವಾಗುತ್ತದೆ. ಮೊದಲಿಗೆ ಶುದ್ಧ ಶರಾಬು ಕುಡಿಯುವ ಈ ವ್ಯಕ್ತಿ ದಿನಕಳೆದಂತೆ ಶುದ್ಧವೇನು, ಅಶುದ್ಧವೇನು? ಬಾಟಲಿಯಲ್ಲಿ ನೀರು ಕೊಟ್ಟರೂ ಕೆರಳುತ್ತಾನೆ. ದುಡ್ಡು ಬಿಸಾಡಿ ಅಮಲು ಖರೀದಿಸುವುದೇ ಜೀವನದ ಪರಮ ಗುರಿಯಾಗುತ್ತದೆ".

ಮಾದಕವಸ್ತು ಸೇವನೆಯಿಂದ ಮಿದುಳಿನ ರೋಗಗಳು ಉಂಟಾಗುವುದೆಂಬ ವಾದದಲ್ಲಿ ಸತ್ಯಾಂಶವಿದೆ. ಕುಡಿತಕ್ಕೆ ಗುಲಾಮರಾಗಿರುವವರಿಗಂತೂ, ಇದು ಅನಿವಾರ್ಯ. ಇದರ ಹಿಂದೆ

ಇತರ ಕಾರಣಗಳೂ ಇರುತ್ತವೆ. ಮಾನಸಿಕ ಅಥವಾ ಅನುವಂಶಿಕ ಕಾರಣಗಳು ಎಲ್ಲಕ್ಕಿಂತ ಹೆಚ್ಚಾಗಿ ಇದರ ಸಾಮಾಜಿಕ ಪರಿಣಾಮಗಳನ್ನು ವಿವರಿಸುವುದರಲ್ಲಿ ಲೇಖಕರು ಪೂರ್ಣ ಯಶಸ್ವಿಯಾಗಿದ್ದಾರೆ. ಇಲ್ಲಿ ಅಪರೂಪವಾಗಿ ಕುಡಿಯುವುದಕ್ಕೂ ಪೂರ್ಣ ಕುಡುಕರಾಗುವುದಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಬೇಕು. ಮಾದಕ ವಸ್ತು ಪ್ರಾಚೀನಕಾಲದಿಂದ, ಬಂದಿರುವ ಪದಾರ್ಥ ಲೇಖಕರು ಹೇಳುವಂತೆ ಪ್ರಾಚೀನ ಈಜಿಪ್ಟ್ ದೇಶದವರೂ ಭಾರತದ ವೇದಗಳ ಕಾಲವಾದರೂ ಇದನ್ನು ಸೇವಿಸುತ್ತಿದ್ದರು.ಚೀಣರು ಗ್ರೀಕರು, ತಮ್ಮ ಧಾರ್ಮಿಕ ಕರ್ಮಗಳಲ್ಲಿ ಇದನ್ನು ಉಪಯೋಗಿಸುತ್ತಿದ್ದರು. ಮದ್ಯಪಾನ ಅತೀ ಹೆಚ್ಚಾದರೆdelirium tremor ಬುದ್ಧಿಭ್ರಮಣೆ ಹುಚ್ಚು ಸಂಭವಿಸುವುದೆಂಬುದು ಸರ್ವರೂ ಒಪ್ಪಿರುವ ಸತ್ಯ. ಅದು ಮನುಷ್ಯನನ್ನು ಅವಿವೇಕ ಸಾಹಸಿಯಾಗಿಯೂ, ಹುಚ್ಚು ಧೈರ್ಯಶಾಲಿಯಾಗಿಯೂ ಮಾಡುವುದೂ ನಿಶ್ಚಯ. ಆತ ವಿವೇಕಬುದ್ಧಿಯನ್ನೂ ಸಂಯಮವನ್ನೂ ಕಳೆದುಕೊಳ್ಳುತ್ತಾನೆ. ಮದ್ಯಪಾನದ ಪರಿಣಾಮ ನರಸಮುದಾಯದ ಮೇಲೆಯೂ ಉಂಟಾಗುತ್ತದೆ. ಆತ ಸೂಕ್ಷ್ಮ ಸ್ವಭಾವವನ್ನು ಚಟುವಟಿಕೆಗಳನ್ನು ಕಳೆದುಕೊಳ್ಳುತ್ತಾನೆ. ಅವನು ಕಸಬುದಾರನೋ ಕಲೆಗಾರನೋ ಆದರೆ, ಆ ಸೃಷ್ಟಿ ಶಕ್ತಿ ನಾಶವಾಗುತ್ತದೆ. **ಇಂದು ನಿತ್ಯ ಸಂಭವಿಸುತ್ತಿರುವ ನಾನಾ ಬಗೆಯ ಪ್ರಾಣ ಆಸ್ತಿ ಹಾನಿ ಆಕಸ್ಮಿಕಗಳಗೂ ಅಪಾಯಗಳಗೂ ಮುಖ್ಯಕಾರಣ, ಮಾದಕ ಸೇವನೆಯೇ!**

ಸಾಮಾಜಿಕವಾಗಿ, ಕುಡುಕ, ಅಸಹ್ಯ ಮಿತ್ರ, ತಾನು ಸ್ವತಃ ಎಷ್ಟೇ ಮದ್ಯವರ್ಜಕನಾಗಿದ್ದರೂ, ಕುಡುಕರ ಜತೆ ತನ್ನನ್ನು ಇತರರು ನೋಡಿದರೆ ಯಾವ ಸದ್ಗೃಹಸ್ತನಿಗೂ ನಾಚಿಕೆಯುಂಟಾಗುತ್ತದೆ. ಕುಡುಕನ ಹತ್ತಿರ ದುರ್ವಾಸನೆ, ತಲೆಹರಟೆ ಗಾಂಭೀರ್ಯರಹಿತ ವರ್ತನೆ; ಅಂಗಾಂಗಗಳ ಚಲನೆಯಲ್ಲಿ ಆತ, ಸಮತೆಯಿಲ್ಲದೆ ತಿರುಗುತ್ತಾನೆ. ಪ್ರಾರಂಭ ದೆಸೆಯಲ್ಲಿ ಕುಡಿತದಿಂದ ಸ್ವಲ್ಪ ನವಚೈತನ್ಯವುಂಟಾದಂತೆ ತೋರಿದರೂ , ಕೊನೆಯಲ್ಲಿ ಅದು ಕುಡುಕನ ಶಕ್ತಿ ಕೇಂದ್ರಗಳನ್ನು ಜರ್ಝರಿತಮಾಡಿ, ಅವನ ಸತ್ವ ಮತ್ತು ತೇಜೋಹಾರಿಯಾಗುತ್ತದೆ. ಅವನು ತನ್ನ ಸಂಸಾರಕ್ಕೆ ಶತ್ರುವೂ ಅಪಾಯಕಾರಿಯೂ ಆಗುತ್ತಾನೆ. ಅವನ ಹೆಂಡತಿ ಮಕ್ಕಳಿಗೆ ಅವನು ಪೂರ್ಣ ಅಪ್ರಿಯನಾಗುತ್ತಾನೆ. ಅವನ ಕಾರ್ಯಗಳು ತೂಕರಹಿತವಾಗುತ್ತವೆ. ಅವನು ಅತಿ ದಾನಿಯಾಗಿ ಹೆಂಡತಿ ಮಕ್ಕಳಗೂ ಸಂಸಾರಕ್ಕೂ ಏನನ್ನೂ ಇಟ್ಟುಕೊಳ್ಳದೆ, ಇರುವುದನ್ನೆಲ್ಲ ದಾನಮಾಡಿಬಿಡುತ್ತಾನೆ. ಅಥವಾ ಅದಕ್ಕೆ ಪ್ರತಿಯಾಗಿ ಅತಿ ಜಿಪುಣನೂ ಪೂರ್ಣ ಸ್ವಾರ್ಥಿಯೂ ಆಗುತ್ತಾನೆ. ಸಮಯಕ್ಕೆ ಸರಿಯಾಗಿ

ಕುಡಿತವನ್ನು ದೊರಕಿಸಿಕೊಳ್ಳಲು, ಕುಡುಕ ಏನುಮಾಡುವುದಕ್ಕೂ ಹಿಂಜರಿಯುವುದಿಲ್ಲ. ಅವನು, ಮೇಲೆ ಬಿದ್ದು ಲೂಟಿ ಮಾಡಬಹುದು ಅಥವಾ ಕೊಲ್ಲಲೂಬಹುದು ಅಂತಹ ಮನುಷ್ಯನ ಮೇಲೆ ಯಾವುದಕ್ಕೂ ನಂಬುವುದು ಎಂದಿಗೂ ಸಾಧ್ಯವಿಲ್ಲ. ಆದರೆ ಈ ಎಲ್ಲ ವಾದಗಳಗೂ ಪ್ರತಿಯಾಗಿ, ಕುಡಿದ ಸ್ಥಿತಿಯಲ್ಲಿ ಒಳ್ಳೆಯ ಮತ್ತು ಕೆಟ್ಟ ಅದ್ಭುತ ಕೃತ್ಯಗಳನ್ನು ಸಾಧಿಸಿರುವವರು ಕೆಲವರು ಇದ್ದಾರೆ ಎಂಬ ವಾದ ಇದೆ. ಆದರೆ ಅವರು ಜನ್ಮದಿಂದಲೇ ಪ್ರತಿಭಾವಂತರು. ಕುಡಿತದ ಅಭ್ಯಾಸ ಹೇಗೆಯೋ ಅವರಲ್ಲಿ ಸೇರಿಬಿಟ್ಟಿತು. ಕುಡಿದಿರಲಿ ಬಿಡಲಿ ಅವರು ಯಾವಾಗಲೂ ಮಹತ್ಕಾರ್ಯಗಳನ್ನು ಸಾಧಿಸಬಲ್ಲರೆಂಬುದರಲ್ಲಿ ಸಂದೇಹವಿಲ್ಲ. ಅಂತಹವರು ಮದ್ಯಪಾನಕ್ಕೆ ಬಲಿಯಾಗದಿದ್ದರೆ ಪ್ರಾಯಶಃ ಅವರು ಇನ್ನೂ ಹೆಚ್ಚು ಮಹಾತ್ಕಾರ್ಯಗಳನ್ನು ಸಾಧಿಸುತ್ತಿದ್ದರು.(**ಡಾ.ಎಂ.ಎ.ಅಯ್ಯಂಗಾರ್**)

ಆಲ್‌ಕೋಹಾಲ್ ಮತ್ತು ನಿಕೋಟಿನ್ ಇವು, ಮನುಷ್ಯನಿಗೆ ಈವರೆಗೆ ತಿಳಿದಿರುವ ವಿಷಯಗಳಲ್ಲಿ ಅತ್ಯಂತ ಕ್ರೂರವಾದುವೆಂಬುದನ್ನು ನಾವು ಎಂದೂ ಮರೆಯಬಾರದು.–(**ಸರ್ ಸಿ.ವಿ. ರಾಮನ್**)

ಮಾದಕ ಪಾನೀಯಗಳನ್ನು ಕಂಡುಹಿಡಿದು ಉಪಯೋಗಿಸಲು ಪ್ರಾರಂಭಿಸಿದರೆಂಬುದು ನಿಖರವಾಗಿ ಗೊತ್ತಾಗಿಲ್ಲ. ಆದರೆ ಅತ್ಯಂತ ಪ್ರಾಚೀನವಾದ ಈಜಿಪ್ಟ್ ಹೀಬ್ರೂ ಮತ್ತು ಭಾರತ ಗ್ರಂಥಗಳಲ್ಲಿ, ಪಾನಮತ್ತತೆಯ ಅಖ್ಯಾಯಿಕೆಗಳೂ, ಪಾನದ ಅಭ್ಯಾಸವನ್ನು ಕಡಿಮೆ ಮಾಡಲು ಅನುಸರಿಸಿದ ಕ್ರಮಗಳೂ ವಿವರಿತವಾಗಿವೆ.ಸುಮಾರು ಐದು ಸಾವಿರ ವರುಷಗಳಿಂದ ಈಚಿನವುಗಳಲ್ಲದ ಈಜಿಪ್ಟ್ ದೇಶದ ಗಾರೆ ಚಿತ್ರಗಳಲ್ಲಿ, ಜನರು ದ್ರಾಕ್ಷಾರಸವನ್ನು ಮಾಡುತ್ತಿರುವುದೂ, ಜವೆ ಗೋಧಿಯಿಂದ ಬೀರ್ ಹೆಂಡ ಮಾಡುತ್ತಿರುವುದೂ, ಅವುಗಳಿಂದ ಉಂಟಾಗುವ ಅಮಲೂ ಚಿತ್ರಿತವಾಗಿವೆ. ಬಹಳ ಪ್ರಾಚೀನವಾದ, ಈಜಿಪ್ಟ್‌ನ ಒಂದು ಗೋರಿಯ ಶಾಸನದಲ್ಲಿ ಹೀಗೆ ಉಲ್ಲೇಖವಿದೆ. “ಈ ಯುವಕ ಅತಿಯಾಗಿ ಮದ್ಯಪಾನ ಮಾಡಿದುದರಿಂದ ಇವನ ಆಯಸ್ಸು ಕತ್ತರಿಸಿ ಹೋಯಿತು.” ಈಜಿಪ್ಟ್‌ರ ಶಾಸನಗಳಲ್ಲಿಯೂ ಶಿಲಾ ಲಿಪಿಗಳಲ್ಲಿಯೂ ಕುಡಿತಕ್ಕೆ ವಿರೋಧವಾದ ಎಚ್ಚರಿಕೆಯೂ ಪ್ರಬೋಧನೆಯೂ ವಿವರಿತವಾಗಿದೆ.

ಈಜಿಪ್ಟ್‌ನವರು ಮಾದಕ ದ್ರವ್ಯಗಳನ್ನು ಕಂಡುಹಿಡಿದ ಕಾಲಕ್ಕೆ ಚೀನಿಯರೂ ಸಹ ದ್ರಾಕ್ಷಾರಸದಿಂದ ಮದ್ಯ ಮಾಡುವುದನ್ನು ಕಂಡುಹಿಡಿದರು. ಒಬ್ಬ ಚೀನಾ ಚಕ್ರವರ್ತಿ ನಾಲ್ಕು ಸಾವಿರ ವರುಷಗಳಿಗೆ ಹಿಂದೆಯೇ, ಮಾದಕ ದ್ರವ್ಯ ಸೇವನೆಯನ್ನು ಪ್ರತಿಬಂಧಿಸಿದನೆಂದು ಚೀನದಲ್ಲಿ ಕತೆಯಿದೆ. ಅಕ್ಕಿಯಿಂದ ಮದ್ಯ ಮಾಡುವುದನ್ನು ಒಬ್ಬ ಬುದ್ಧಿವಂತನಾದ ಲೈ–ಟೈ ಎಂಬ ರೈತ ಕಂಡು ಹಿಡಿದನು. ಇದು ನಡೆದುದು ಕ್ರಿ.ಪೂ.2027 ರಲ್ಲಿ. ಆಗ ಚಕ್ರವರ್ತಿಯಾಗಿದ್ದ ಟಾ–ಯು ಎಂಬಾತ, ಮದ್ಯದ ತಯಾರಿಯನ್ನೂ ಉಪಯೋಗವನ್ನೂ ಪ್ರತಿಬಂಧಿಸಿದ್ದನು. ಕಾನೂನನ್ನು ಮೀರಿದವರಿಗೆ ಕ್ರೂರವಾದ ಶಿಕ್ಷೆ ಆಗುತ್ತಿತ್ತು. ಇಷ್ಟಾದರೂ ಚೀನ ದೇಶದಲ್ಲಿ ಕುಡಿತದ ಅಭ್ಯಾಸ ಮಿತಿಮೀರಿ ಬೆಳೆಯಿತು. ಅನಂತರ ಬಂದ ಒಬ್ಬ ಚಕ್ರವರ್ತಿ, ಕ್ರಿ.ಪೂ. 1100ರಲಲ್ಲಿ ಪಾನವನ್ನು ಪೂರ್ಣವಾಗಿ ನಿರೋದಿಸಿದುದಲ್ಲದೆ ದೇಶದಲ್ಲಿದ್ದ ಎಲ್ಲ ದ್ರಾಕ್ಷಿ ಗಿಡಗಳನ್ನೂ ನಾಶಮಾಡಿಸಿದನು. ಅಲ್ಲಿಂದ ಈಚೆಗೆ ಚೀನದಲ್ಲಿ ದ್ರಾಕ್ಷಿ ಗಿಡಕ್ಕೆ ಮತ್ತೆ ಪ್ರವೇಶ ದೊರೆತಿಲ್ಲ.

ಬೈಬಲ್‌ನಲ್ಲಿಯೂ ಮದ್ಯದ (ದ್ರಾಕ್ಷಿಯಿಂದ ಮಾಡಿದ್ದು) ವಿಷಯ ಅನೇಕ ಸಲ ಬರುತ್ತದೆ. ಈ ಸಂಗತಿಯಲ್ಲಿ ಅತ್ಯಂತ ಪ್ರಾಚೀನವಾದುದು ನೋಹಾನನ ಕುಡಿತ. ಸುಮಾರು ನಾಲ್ಕು ಸಾವಿರ ವರುಷಗಳ ಹಿಂದೆ ಬೈಬಲ್ಲಿನಲ್ಲಿ ಹೇಳಿರುವ ದೋಣಿಯನ್ನು ಕಟ್ಟಿದ ನೋಹಾನನೇ ಇವನು.ಅತ್ಯಂತ ಪ್ರಾಚೀನ ವೇದವಾದ ಋಗ್ವೇದದಲ್ಲಿ ಮದ್ಯಪಾನವನ್ನು ನಿಷೇಧಿಸಿದ್ದಾರೆ. ಸ್ಮೃತಿಗಳಲ್ಲಿಯೂ ಶ್ರುತಿಗಳಲ್ಲಿಯೂ ನಿಷೇಧಿಸಿದ್ದಾರೆ. ಮನು ಮತ್ತು ಕೌಟಿಲ್ಯರೂ ನಿಷೇಧಿಸಿದ್ದಾರೆ. ಕುಡಿತಕ್ಕೆ ಕ್ರೂರವಾದ ಶಿಕ್ಷೆ ವಿಧಿಸುತ್ತಿದ್ದರು. ಇದರಿಂದ ಸಾಧಾರಣವಾಗಿ ಎಲ್ಲರಲ್ಲಿಯೂ ಕುಡಿತ, ಅಭ್ಯಾಸದಲ್ಲಿತ್ತೆಂದು ತಿಳಿಯಬಹುದು.

ಮೆಸಪೊಟೇಮಿಯಾದಿಂದ ದ್ರಾಕ್ಷಾರಸವೂ ಜೀತವೃಕ್ಷ (ಆಲಿವ್)ವೂ ಮೊದಲು ಗ್ರೀಸಿಗೂ ಅನಂತರ ರೋಮ್‌ಗೂ ಹೋಯಿತು. ಗ್ರೀಕ್‌ರಲ್ಲಿಯೂ ರೋಮನ್‌ರಲ್ಲಿಯೂ ನಾನಾ ಬಗೆಯ ಮದ್ಯಪಾನೀಯಗಳು ಪ್ರಚಾರದಲ್ಲಿದ್ದವು ಅವರು ಮಿತಿ ಮೀರಿ ಕುಡಿಯುತ್ತಿದ್ದರು. ಆ ದುಶ್ಚಟವನ್ನು ಹೋಮರ್ ಮತ್ತು ಪ್ಲೈನಿ ತುಂಬ ತಿರಸ್ಕರಿಸಿದ್ದಾರೆ.ಮದ್ಯವನ್ನು ಭಟ್ಟಿ ಇಳಿಸುವ ಕ್ರಮವನ್ನು ಹನ್ನೆರಡನೆಯ ಶತಮಾನದಲ್ಲಿ ಕಂಡುಹಿಡಿದರೆಂದು ಕಾಣುತ್ತದೆ. ಇದನ್ನು ಕಂಡುಹಿಡಿದವನ ಹೆಸರು ಜಹಾನದ ಅಲ್‌ಬುಕಾಸಿಸ್ ಎಂಬುದು ಈತನಿಗೆ ಅಬುಲ್ ಕಾಸಿಸ್

ಎಂದೂ ಹೆಸರಿದ್ದಿತೆಂದು ಅವನ ಸಮಕಾಲೀನರು (ಕ್ರಿ.ಶ.೧೧೨೦) ಹೇಳುತ್ತಾರೆ. ಆ ಉಪಕರಣವನ್ನು ಸುಟ್ಟ ಮಣ್ಣಿನಿಂದಲೂ ಗಾಜಿನಿಂದಲೂ ಮಾಡಿರುತ್ತಿದ್ದರೆಂದು ಗೊತ್ತಾಗುತ್ತೆ. ಆದರೆ ಹದಿನೈದನೆಯ ಶತಮಾನದ ವೇಳೆಗೆ ಈ ಭಟ್ಟಿ ಇಳಸುವ ಜ್ಞಾನ ಎಲ್ಲರಿಗೂ ಸಾಧಾರಣವಾಗಿ ಗೊತ್ತಾಗಿದ್ದಿತು. ವಿಸ್ಕಿ ಬ್ರ್ಯಾಂದಿ; ರಮ್ ಗಿನ್ ಇವುಗಳನ್ನು ಸುಲಭವಾಗಿ ಭಟ್ಟಿ ಇಳಸುತ್ತಿದ್ದರು.

**ಜಗತ್‌ಪ್ರಸಿದ್ಧ ವಿಜ್ಞಾನಿಯಾದಸರ್ ಫ್ರೆಡರಿಕ್ ಗೌಲಾಂಡ್ ಹಾಪ್‌ಕಿನ್ಸ್**(Sir Freseric Gowland Hopkins) ಈ ಅಭಿಪ್ರಾಯವನ್ನೇ ವ್ಯಕ್ತಪಡಿಸಿದ್ದಾರೆ. ಲಂಡನ್ ವಿಶ್ವವಿದ್ಯಾಲಯದಲ್ಲಿ ಮಾತನಾಡುತ್ತಾ, ಅವರು "ಆಲ್‌ಕೊಹಾಲ್‌ನ್ನು ದೇಹ ಭಸ್ಮ ಮಾಡುವುದರ ಕಾರಣ ಆದಷ್ಟು ಬೇಗ ಆ ವಿಷವನ್ನು ದೇಹದಿಂದ ಹೊರದೂಡಬೇಕೆಂಬುದೇ ಆಗಿದೆ" ಎಂದು ಹೇಳದರು.

**ಕೊಲಂಬಿಯಾ ವಿಶ್ವವಿದ್ಯಾಲಯದ ಮನಶಾಸ್ತ್ರ ಪ್ರೋಫೆಸರ್ ಡಾಕ್ಟರ್ ಫೆಡರಿಕ್ ಪೀಟರ್‌ಸನ್‌ರು**(Prof. Dr. Frederic Peterson M.D.) ಹೀಗೆ ಹೇಳದ್ದಾರೆ. "ಕೆಲವರು ಆಲ್ಕೋಹಾಲ್, ಆಹಾರವೆನ್ನುತ್ತಾರೆ. ಆಗಲಿ ಆಹಾರವಾದರೆ ಅದು ವಿಷಪೂರಿತ ಆಹಾರ."

ಔಷಧ ಪ್ರಯೋಗ ಪದ್ಧತಿಯಲ್ಲಿ, ವೈದ್ಯರು ಮದ್ಯವನ್ನು ಕ್ಲೋರೋಫಾರಂ ಮತ್ತು ಈತರ್ (ಇಂದ್ರಿಯ ಸುಪ್ತಿಕಾರಕ) ವಸ್ತುಗಳಿಗೆ ಸಮವಾದ ವಿಷವೆಂದು ಪರಿಗಣಿಸಿದ್ದಾರೆ. ಆದುದರಿಂದ ಮದ್ಯವನ್ನು ವಿಷವೆಂದು ಕರೆಯುವುದು ವೈಜ್ಞಾನಿಕವಾಗಿ ಸರಿ. **ಪ್ರಸಿದ್ಧ ದೇಹಶಾಸ್ತ್ರ ವಿಜ್ಞಾನಿ ಪ್ರೋಫೆಸರ್ ಫಿಕ್ (Fick)**ರವರು 'ಮದ್ಯವೂ ಮತ್ತು ದೇಹವೂ' ಎಂಬ ಗ್ರಂಥದಲ್ಲಿ ಹೇಳಿರುವ ಅಭಿಪ್ರಾಯದಿಂದ, ಪ್ರತಿಷ್ಠಿತ ವೈದ್ಯರು ಈ ಪ್ರಶ್ನೆಯನ್ನು ಹೇಗೆ ನೋಡುತ್ತಾರೆಂದು ಗೊತ್ತಾಗುತ್ತದೆ. ಮರಣವು ಸಂಭವಿಸುವಷ್ಟು ಅತಿಯಾಗಿ ಜನರು ಮಾದಕ ವಸ್ತುಗಳನ್ನು ಒಂದೇ ಸಲಕ್ಕೆ ಸೇವಿಸುವುದಿಲ್ಲವೆಂಬುದು ನಿಜ. ಆದರೆ, ಮಿತವಾಗಿ ಕುಡಿಯುತ್ತಾ ಇದ್ದರೂ ದೇಹವನ್ನು ಪೂರ್ಣವಾಗಿ ನಿಧಾನವಾಗಿ ನಿಶ್ಯಕ್ತಿಗೊಳಿಸಿ ಅದನ್ನು ರೋಗಕ್ಕೆ ಈಡುಮಾಡುವುದು ಮದ್ಯದ ಸ್ವಭಾವ. ಆಫ್ರಿಕದಲ್ಲಿ ಬಿಳಿ ಇರುವೆ (ಗೆದ್ದಲು) ಹೇಗೆ ನಾಶ ಮಾಡುತ್ತದೋ ಹಾಗೆಯೇ ಮದ್ಯವೂ ಮಾಡುತ್ತದೆ.

ಹೃದಯದ ಕಾರ್ಯದ ಮೇಲೆ ಮದ್ಯಪಾನದಿಂದ ಆಗುವ ಪರಿಣಾಮಗಳನ್ನು ಜಾನ್ ಹಾಪ್‌ಕಿನ್ ವಿಶ್ವವಿದ್ಯಾಲಯದ ಪ್ರಯೋಗ ಶಾಲೆಯಲ್ಲಿ ಪರೀಕ್ಷಿಸಿ ಈ ಕೆಳಗಿನ ತೀರ್ಮಾನಕ್ಕೆ ಬಂದಿದ್ದಾರೆ. "ರಕ್ತದಲ್ಲಿ ಶೇಕಡ ೧/೪ ಭಾಗ (.೨೫) ಮಾದಕ ದ್ರವ್ಯ ಸೇರಿದ ಕೂಡಲೇ ಹೃದಯ ಕ್ರಿಯೆ ನಿಧಾನವಾಯಿತು. ಶೇಕಡ ೧/೨ ಭಾಗ (.೫) ಮದ್ಯ ರಕ್ತದಲ್ಲಿ ಸೇರಿದ ಕೂಡಲೇ, ತನ್ನನ್ನು ಪೋಷಿಸುವ ರಕ್ತನಾಳಗಳಿಗೇ ರಕ್ತವನ್ನು ದಬ್ಬಲು, ಹೃದಯ ಪೂರ್ಣವಾಗಿ ನಿಶ್ಯಕ್ತವಾಯಿತು.

ಇನ್‌ಫ್ಲುಎನ್‌ಜಾ ಅಥವಾ ನ್ಯೂಮೋನಿಯಾ ರೋಗಗಳಲ್ಲಿ ಕುಡುಕರು ಬಹಳ ಬೇಗ ಮರಣಕ್ಕೆ ತುತ್ತಾಗುತ್ತಾರೆ. ಕುಡಿತದಿಂದ ಅವರ ಹೃದಯ ದುರ್ಬಲವಾಗಿಲ್ಲದೆ ಇದ್ದಿದ್ದರೆ, ಅನೇಕ ಯುವಕರು ಆ ರೋಗಗಳನ್ನು ಪ್ರತಿಭಟಿಸಿ, ತಮ್ಮ ಪೂರ್ಣ ಆಯಸ್ಸನ್ನು ಬಾಳುತ್ತಿದ್ದರೆಂಬುದರಲ್ಲಿ ಸಂದೇಹವೇ ಇಲ್ಲ. **ಸರ್ ಹರ್ಮನ್ ವೆಬ್ಬರ್ ಎಂ.ಡಿ.ಎಫ್.ಆರ್.ಸಿ.ಎಸ್.ರವರು** ಮದ್ಯಪಾನವೂ ವೃದ್ಧಾಪ್ಯವೂ ಎಂಬ ಗ್ರಂಥದಲ್ಲಿ ಬರೆದಿರುವ ಅಭಿಪ್ರಾಯವನ್ನು ವಾಚಕರ ಲಕ್ಷ್ಯಕ್ಕೆ ತರುತ್ತೇವೆ.

ಅತಿಯಾದ ಮಾದಕ ವಸ್ತು ಸೇವನೆಯಿಂದ, ಬೆನ್ನು ಮೂಳೆ ಹುರಿಯ ನರಕಣಗಳೂ ಶಿಥಿಲವಾಗಿ, ನರಗಳ ಊದು ಪಾರ್ಶ್ವವಾಯು ಉಂಟಾಗುತ್ತವೆ. ಜೀವಕಣಗಳು ಸಂಕುಚಿತವಾಗುತ್ತವೆ. ಅವುಗಳ ಅಂಚುಗಳು ಮಡಿಚಿಕೊಂಡು ಮಧ್ಯಭಾಗ ಸ್ಥಳಾಂತರವಾಗುತ್ತವೆ. "ಮಾದಕವಸ್ತುವೂ ಮನುಷ್ಯನ ದೇಹವೂ" ಎಂಬ ಗ್ರಂಥದ **೧೩೬ನೆಯ ಪುಟದಲ್ಲಿ ಸರ್ ವಿಕ್ಟರ್ ಹಾರ್ಸ್ಲಿ (Horsley)**ಹೀಗೆ ಹೇಳುತ್ತಾರೆ. "ಜೀವಕಣಗಳು ನಿಶ್ಯಕ್ತವಾಗಿ ಸಂಕುಚಿತವಾಗಿ ಅದೃಶ್ಯವಾದಾಗ, ಅವುಗಳ ಸ್ಥಳವನ್ನು ನರಸಮುದಾಯಗಳ ಸ್ನಾಯು ಜಾಲ ಆವರಿಸುತ್ತದೆ. ಈ ಸ್ನಾಯು ಜಾಲಕ್ಕೆ ಮಾಡಬೇಕಾದ ಕಾರ್ಯವೇನೂ ಇಲ್ಲ. ಇದು ಜೀವಕಣಗಳ ಮೇಲೆ ವಜ್ರದ ಮೇಲೆ ಹತ್ತಿಯನ್ನು ಸುತ್ತಿರುವಂತೆ ಸುತ್ತಿಕೊಂಡಿರುತ್ತದೆ. ಆತ್ಮಹತ್ಯೆಗೆ ಅನೇಕ ಸಂದರ್ಭಗಳಲ್ಲಿ  ಮಾದಕ ವಸ್ತುವೇ ಕಾರಣವೆಂಬುದಕ್ಕೆ ಬೇಕಾದಷ್ಟು ನಿದರ್ಶನಗಳು ದೊರೆತಿವೆ. ಒಂದೆರಡನ್ನು ಮುಂದೆ ಕೊಡುತ್ತೇವೆ. ಅಮೆರಿಕದ ಸೆರೆಮನೆಗಳ ವೈದ್ಯಾಧಿಕಾರಿ **ಡಾಕ್ಟರ್ ಡಬ್ಲ್ಯು. ಸಿ. ಸ್ಯಲಿವಾನ್ ಎಂ.ಡಿ.**ರವರು ತಮ್ಮ ಗ್ರಂಥದ ೫೫ನೆಯ ಪುಟದಲ್ಲಿ ಹೀಗೆ ಹೇಳಿದ್ದಾರೆ. 'ಆತ್ಮಹತ್ಯೆ' ಮಾಡಿಕೊಳ್ಳಲು ಪ್ರಯತ್ನಿಸಿದ ೨೨೦ ಸಂದರ್ಭಗಳ ಪರೀಕ್ಷೆಯಲ್ಲಿ, ಶೇಕಡ ೭೮ ರಷ್ಟು ಜನ ಮದ್ಯಪಾಯಿಗಳು, ಅವರಲ್ಲಿ ಶೇಕಡ ೬೦ ಜನ ಮಿತಿಮೀರಿ ಕುಡಿದವರು.

# ಅಧ್ಯಾಯ–೨

# ಸೂಚನದಾರರ ಸಾಮಾಜಿಕ-ಆರ್ಥಿಕ ಹಿನ್ನೆಲೆ

(ಮಾಹಿತಿ ವಿಶ್ಲೇಷಣೆ)

## ಅಧ್ಯಾಯ - ೨

## ಸೂಚನದಾರರ ಸಾಮಾಜಿಕ – ಆರ್ಥಿಕ ಹಿನ್ನೆಲೆ

(ಮಾಹಿತಿ ವಿಶ್ಲೇಷಣೆ)

ಈ ಅಧ್ಯಾಯವು ಸೂಚನದಾರರ ಸಾಮಾಜಿಕ-ಆರ್ಥಿಕ ಹಿನ್ನೆಲೆಯ ಬಗ್ಗೆ ವಿಶ್ಲೇಷಣೆ ನೀಡುತ್ತದೆ. ಇದರಲ್ಲಿ ಸೂಚನದಾರರ ವಯಸ್ಸು, ವೈವಾಹಿಕ ಸ್ಥಾನಮಾನ, ಉದ್ಯೋಗ, ಕುಟುಂಬದ ವಾರ್ಷಿಕ ಆದಾಯ, ವಿದ್ಯಾರ್ಹತೆ ಮತ್ತು ಕುಟುಂಬದ ನಮೂನೆಯ ಬಗ್ಗೆ ಮಾಹಿತಿ ಮತ್ತು ಅವುಗಳ ಚರ್ಚೆ, ವಿಶ್ಲೇಷಣೆಗಳನ್ನು ಪ್ರಸ್ತುತಪಡಿಸಲಾಗಿದೆ.

**ಕೋಷ್ಟಕ 1.1 – ಸೂಚನದಾರರ ಪ್ರಾಯದ ವಿವರ**

| ಕ್ರ.ಸಂ. | ಪ್ರಾಯ | ಒಟ್ಟು ಸಂಖ್ಯೆ | ಶೇಕಡವಾರು | X | fx |
|---|---|---|---|---|---|
| 1. | 20-35 | 04 | 13.33 | 27.50 | 110.00 |
| 2. | 35-50 | 17 | 56.67 | 42.50 | 722.50 |
| 3. | 50-65 | 08 | 26.67 | 57.50 | 460.00 |
| 4. | 65ಕ್ಕೂ ಮೇಲ್ಪಟ್ಟು | 01 | 3.33 | 72.50 | 72.50 |
| | ಒಟ್ಟು | 30 | 100.00 | 1365 | $\Sigma fx$ - 1365 |

**ರೇಖಾಚಿತ್ರ 1.1 (A) ಶೇಕಡವಾರು ಪ್ರಾಯದ ವಿವರ**



ರೇಖಾಚಿತ್ರ 1.1(A) – ಪ್ರಸ್ತುತ ಅಧ್ಯಯನದಲ್ಲಿ ಅತಿ ಹೆಚ್ಚು ಎಂದರೆ 17(56.67%) ಸೂಚನದಾರರು, 35ರಿಂದ 50 ವರ್ಷದ ಪ್ರಾಯದವರಾಗಿರುತ್ತಾರೆ. 8(26.67%) ಸೂಚನದಾರರ ಪ್ರಾಯ 50ರಿಂದ 65, 4(13.33%) 20-25 ವರ್ಷ, ಒಂದು ಸೂಚನದಾರರ ಪ್ರಾಯ 65ಕ್ಕೂ ಮೇಲ್ಪಟ್ಟವರಾಗಿರುತ್ತಾರೆ.ಕೋಷ್ಟಕದ ಮಾಹಿತಿಯಂತೆ ಮದ್ಯವ್ಯಸನಗಳಗೆ ಒಳಗಾಗುವವರಲ್ಲಿ ಬಹುಪಾಲು ಜನ 40ರಿಂದ 50 ವರ್ಷದ ಮದ್ಯವಯಸ್ಕರಾಗಿರುತ್ತಾರೆ ಎಂಬುದು ಸ್ಪಷ್ಟವಾಗುತ್ತದೆ. ಮತ್ತು ಮಾಹಿತಿದಾರರ ಸರಾಸರಿ ವಯಸ್ಸು 45.5 ಆಗಿರುತ್ತದೆ.

**ಕೋಷ್ಟಕ 1.2 – ಸೂಚನದಾರರ ವೈವಾಹಿಕ ಸ್ಥಾನಮಾನ**

| ಕ್ರಮ ಸಂಖ್ಯೆ | ವೈವಾಹಿಕ ಸ್ಥಾನಮಾನ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಮದುವೆಯಾಗಿದೆ | 21 | 70.00 |
| 2. | ಮದುವೆಯಾಗಿಲ್ಲ | 08 | 26.67 |
| 3. | ವಿಧವೆ/ವಿಧುರ | 01 | 3.33 |
| 4. | ವಿಚ್ಛೇದಿತ | – | – |
| 5. | ಪ್ರಾತ್ಯಾಕಿತ | – | – |
|  | **ಒಟ್ಟು** | **30** | **100.00** |

ಕೋಷ್ಟಕ 1.2 – ವೈವಾಹಿಕ ಸ್ಥಾನಮಾನವನ್ನು ತಿಳಿಸುತ್ತದೆ. ಸುಮಾರು 21(70%) ಸೂಚನದಾರರಿಗೆ ಮದುವೆ ಆಗಿ ಮಕ್ಕಳೊಂದಿಗೆ ಸಂಸಾರ ನಡೆಸುತ್ತಿದ್ದಾರೆ. 08(26.67%) ಸೂಚನದಾರರಿಗೆ ಮದುವೆಯಾಗಲಿಲ್ಲ. ಒಬ್ಬರು (3.33%) ಸೂಚನದಾರರು ವಿಧುರರಾಗಿದ್ದಾರೆ. ಕೋಷ್ಟಕದ ಅಂಕಿ ಅಂಶಗಳನ್ನು ಗಮನಿಸಿದಾಗ ಮದ್ಯವ್ಯಸನಿಗಳಲ್ಲಿ ಹೆಚ್ಚಿನವರು ವಿವಾಹಿತರಾಗಿದ್ದಾರೆ ಎಂಬ ಅಂಶ ಬೆಳಕಿಗೆ ಬಂದಿರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ವಿಚ್ಛೇದನೆಗೆ ಮದ್ಯಪಾನವೇ ಪ್ರಮುಖ ಕಾರಣ ಎಂಬ ಅಂಶವು ಕಂಡು ಬರಲಿಲ್ಲ.

## ರೇಖಾಚಿತ್ರ 1.3(A)
## ಸೂಚನದಾರರ ಶೇಕಡವಾರು ಉದ್ಯೋಗದ ವಿವರ




ರೇಖಾಚಿತ್ರ 1.3(A) – ಉದ್ಯೋಗದ ವಿವರವನ್ನು ತಿಳಿಸುತ್ತದೆ. ಬಹುಪಾಲು 12(40%) ಸೂಚನದಾರರು ಕೂಲಿ ಮಾಡಿ ಜೀವನವನ್ನು ಸಾಗಿಸುತ್ತಿದ್ದಾರೆ. 08(26.67%) ಕೃಷಿಯನ್ನೇ ಉದ್ಯೋಗವನ್ನಾಗಿ ಆರಿಸಿಕೊಂಡಿದ್ದಾರೆ. ಒಬ್ಬರು (3.33%) ವ್ಯಾಪಾರ ಮತ್ತು 2(6.67%) ಸರ್ಕಾರಿ ಸಂಸ್ಥೆಯಲ್ಲಿ ಗುಮಾಸ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸುಮಾರು 7(23.33%) ಸೂಚನದಾರರು ಪೈಂಟಿಂಗ್, ಮರದ ಕೆಲಸ, ಚಾಲಕರಾಗಿ ಕೆಲಸವನ್ನು ಮಾಡುತ್ತಿದ್ದಾರೆ.

ಕೋಷ್ಟಕವನ್ನು ಪರಿಶೀಲಿಸಿದಾಗ ಮದ್ಯವ್ಯಸನಕ್ಕೆ ಬಲಿಯಾಗುವವರಲ್ಲಿ ಕೂಲಿ ಕಾರ್ಮಿಕರೇ ಹೆಚ್ಚು ಎಂದು ತಿಳಿದುಬರುತ್ತದೆ.

### ಕೋಷ್ಟಕ 1.4 – ಸೂಚನದಾರರ ಕುಟುಂಬದ ವಾರ್ಷಿಕ ಆದಾಯ

| ಕ್ರಮ ಸಂಖ್ಯೆ | ವಾರ್ಷಿಕ ಆದಾಯ (ರೂ.ಗಳಲ್ಲಿ) | ಒಟ್ಟು ಸಂಖ್ಯೆ | ಶೇಕಡಾವಾರು | X | FX |
|---|---|---|---|---|---|
| 1. | 10,000 – 30,000 | 6 | 20.00 | 20,000 | 1,20,000 |
| 2. | 30,000 – 40,000 | 3 | 10.00 | 35,000 | 4,50,000 |
| 3. | 40,000 – 50,000 | 10 | 33.34 | 45,000 | 6,75,000 |
| 4. | 50,000 – 1,00,000 | 9 | 30.00 | 75,000 | 1,25,000 |
| 5. | 1,00,000 – 1,50,000 | 1 | 3.33 | 1,25,000 | 1,25,000 |
| 6. | 1,50,000 ಕ್ಕಿಂತ ಮೇಲ್ಪಟ್ಟು | 1 | 3.33 | 1,75,000 | 1,75,000 |
| | ಒಟ್ಟು | 30 | 100.00 | - | $\mathcal{E}fx$=16,50,000 |

ವಾರ್ಷಿಕ ಸರಾಸರಿ = ರೂ. 55,000.00 ಮಾಸಿಕ ಆದಾಯ = ರೂ. 4,583.34

ಕೋಷ್ಟಕ 1.4 – ಸೂಚನದಾರರ ಕುಟುಂಬದ ವಾರ್ಷಿಕ ಆದಾಯದ ಬಗ್ಗೆ ವಿವರಣೆ ನೀಡುತ್ತದೆ. ಸುಮಾರು 10(33.33%) ಸೂಚನದಾರರ ಆದಾಯ ಎಲ್ಲಾ ಮೂಲಗಳಿಂದ ರೂ. 40,000ರಿಂದ 50,000, 09(30%) ಸೂಚನದಾರರ ಅದಾಯ ರೂ. 50,000 ದಿಂದ 1 ಲಕ್ಷ, 6(20%) ಸೂಚನದಾರರ ಆದಾಯ ರೂ. 10000ದಿಂದ 30,000, 3(10%) ಆದಾಯ ರೂ. 30,000 ದಿಂದ 40,000 ಹಾಗೂ 2(6.66%) ಆದಾಯ ಕ್ರಮವಾಗಿ ರೂ. 1 ಲಕ್ಷದಿಂದ 1,50,000 ಮತ್ತು ರೂ. 1,50,000ಕ್ಕೂ ಆದಾಯ ಆಗಿರುತ್ತದೆ.

ಕೋಷ್ಟಕ 1.4ನ್ನು ಗಮನಿಸಿದಾಗ ಕಡಿಮೆ ಆದಾಯ ಹೊಂದಿರುವ ಕಾರ್ಮಿಕ ವರ್ಗ ಮದ್ಯವ್ಯಸನಕ್ಕೆ ಬಲಿಯಾಗುತ್ತಿರುವ ಅಂಶ ಸ್ಪಷ್ಟವಾಗುತ್ತದೆ. ಕುಟುಂಬದ ಆದಾಯವನ್ನು ಪರಿಶೀಲಿಸಿದಾಗ ವಾರ್ಷಿಕ ಸರಾಸರಿ ಆದಾಯ ರೂ. 55,000 ಆಗಿರುತ್ತದೆ ಮತ್ತು ಅವರ ಮಾಸಿಕ ಸರಾಸರಿ ಆದಾಯವು ರೂ. 4,583.34 ಆಗಿರುತ್ತದೆ.

**ಕೋಷ್ಟಕ 1.5 – ಸೂಚನದಾರರ ವಿದ್ಯಾರ್ಹತೆ / ಶೈಕ್ಷಣಿಕ ಅರ್ಹತೆ**

| ಕ್ರಮ ಸಂಖ್ಯೆ | ವಿದ್ಯಾರ್ಹತೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಅನಕ್ಷರಸ್ಥ | 6 | 20.00 |
| 2. | ಪ್ರಾಥಮಿಕ ಶಿಕ್ಷಣ | 13 | 43.33 |
| 3. | ಎಸ್ಸೆಸ್ಸೆಲ್ಸಿ | 9 | 30.00 |
| 4. | ಪಿಯುಸಿ | 2 | 6.67 |
| 5. | ಪದವಿ | – | – |
| 6. | ಸ್ನಾತಕೋತ್ತರ | – | – |
| 7. | ಇತರ | – | – |
| | **ಒಟ್ಟು** | **30** | **100.00** |

ಕೋಷ್ಟಕ 1.5 – ಸೂಚನದಾರರ ವಿದ್ಯಾರ್ಹತೆಯನ್ನು ತಿಳಿಸುತ್ತದೆ. ಸುಮಾರು 13(43.33%) ಸೂಚನದಾರರು ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಮುಗಿಸಿರುತ್ತಾರೆ. 06(20%) ಅನಕ್ಷರಸ್ಥರಾಗಿದ್ದು ಯಾವುದೇ ರೀತಿಯ ಸಾಮಾಜಿಕ ಅರಿವು ಅವರಿಗಿರದಿರುವ ಅಂಶ ಕಂಡುಬಂದಿದೆ. 09(30%) ಎಸ್ಸೆಸ್ಸೆಲ್ಸಿ ಉತ್ತೀರ್ಣರಾಗಿರುತ್ತಾರೆ. ಕೇವಲ 02(6.67%) ಸೂಚನದಾರರು ಪಿ.ಯು.ಸಿಯನ್ನು ಮಾಡಿದ್ದು ಪ್ರಸ್ತುತ ವ್ಯಾಪಾರವನ್ನು ಜೀವನ ಕಸುಬಾಗಿ ಮಾಡುತ್ತಿರುತ್ತಾರೆ.

ಕೋಷ್ಟಕದ ಮಾಹಿತಿ ಪ್ರಕಾರ ಅನಕ್ಷರಸ್ಥರ ಜೊತೆಗೆ ಶೈಕ್ಷಣಿಕವಾಗಿ ಅವಕಾಶವಂಚಿತ ಅಥವಾ ಕೇವಲ ಪ್ರಾಥಮಿಕ ಶಿಕ್ಷಣ ಪೂರೈಸಿದ ಹೆಚ್ಚಿನವರು, ಪ್ರೌಢ ಶಿಕ್ಷಣ ಪಡೆದವರು ಮದ್ಯವ್ಯಸನಕ್ಕೆ ದಾಸರಾಗುತ್ತಿರುವ ಅಂಶ ಗೋಚರವಾಗುತ್ತದೆ. ಶೈಕ್ಷಣಿವಾಗಿ ಯಾವುದೇ ಭೇದವಿಲ್ಲದೆ ಎಲ್ಲರನ್ನೂ ಈ ಮದ್ಯವ್ಯಸನವು ಆವರಿಸಿದೆ.

**ಕೋಷ್ಟಕ 1.6 –ಕುಟುಂಬದ ಪ್ರಕಾರದ ಆಧಾರದಲ್ಲಿ ಸೂಚನದಾರರ ಹಂಚಿಕೆ**

| ಕ್ರಮ ಸಂಖ್ಯೆ | ಕುಟುಂಬದ ಪ್ರಕಾರ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ವಿಭಕ್ತ ಕುಟುಂಬ | 15 | 50.00 |
| 2. | ಅವಿಭಕ್ತ ಕುಟುಂಬ | 15 | 50.00 |
| 3. | ವಿಸ್ತೃತ ಕುಟುಂಬ | – | – |
| | **ಒಟ್ಟು** | **30** | **100.00** |

ಕೋಷ್ಟಕ 1.6 – ಕುಟುಂಬದ ಪ್ರಕಾರದ ಬಗ್ಗೆ ತಿಳಸುತ್ತದೆ. ಪ್ರಸ್ತುತ ಅಧ್ಯಯನದಲ್ಲಿ 15(50%) ಸೂಚನದಾರರು ವಿಭಕ್ತ ಕುಟುಂಬದೊಂದಿಗೆ ಜೀವನ ನಡೆಸುತ್ತಿದ್ದು, ಇನ್ನುಳಿದ 15(50%) ಸೂಚನದಾರರು ತುಂಬು ಕುಟುಂಬ/ಅವಿಭಕ್ತ ಕುಟುಂಬದೊಂದಿಗೆ ಪರಸ್ಪರ ಒಬ್ಬರಿಗೊಬ್ಬರು ಸಹಾಯ ಮಾಡುತ್ತಾ ಜೀವನ ನಡೆಸುತ್ತಿರುವ ಅಂಶವನ್ನು ಕಂಡುಕೊಳ್ಳಲಾಗಿದೆ.

ಕುಟುಂಬದ ಪ್ರಕಾರಗಳನ್ನು ಗಮನಿಸಿದಾಗ ಮದ್ಯವ್ಯಸನಕ್ಕೆ ತೊಡಗಿದವರಲ್ಲಿ ಶೇ. 50ರಷ್ಟು ಜನ ವಿಭಕ್ತ ಕುಟುಂಬ ಮತ್ತು ಅವಿಭಕ್ತ ಕುಟುಂಬದ ಹಿನ್ನೆಲೆಯಿಂದ ಬಂದವರಾಗಿರುವುದು ಅಧ್ಯಯನದಿಂದ ತಿಳಿದುಕೊಳ್ಳಬಹುದು.

# ಅಧ್ಯಾಯ – ೩

# ಮದ್ಯವ್ಯಸನದ ಸಮಸ್ಯೆಗಳು

## (ಮಾಹಿತಿ ವಿಶ್ಲೇಷಣೆ)

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಈ ಅಧ್ಯಾಯದಲ್ಲಿ ಸೂಚನದಾರರು ಮದ್ಯವ್ಯಸನ ಚಿಕಿತ್ಸೆಯ ಮೂಲಕ ವಿಮುಕ್ತಿಗೊಳ್ಳುವ ಮೊದಲು ವ್ಯಸನಿಗಾಗಿ ಯಾವ ರೀತಿಯ ಸಮಸ್ಯೆಗಳನ್ನೆಲ್ಲಾ ಎದುರಿಸಿದ್ದಾರೆ ಎಂಬುದರ ಕುರಿತಾಗಿ ಇಲ್ಲಿ ವಿಶ್ಲೇಷಿಸಲಾಗಿದೆ. ಸೂಚನದಾರರ ಸಮಸ್ಯೆಗಳಾದ ಅನಾರೋಗ್ಯ, ಖಿನ್ನತೆ, ಸಂಶಯ ಪ್ರವೃತ್ತಿ, ದೇಹದ ತೂಕದಲ್ಲಿನ ಇಳಿತ, ಸಮಾಜದಲ್ಲಿ ಕಡಿಮೆ ಸ್ಥಾನಮಾನ, ಮಡದಿ ಮತ್ತು ಮಕ್ಕಳ ಜೊತೆಗೆ ಜಗಳ, ಮನೆಯ ವಸ್ತುಗಳನ್ನು ಗಿರವಿ ಇಡುವುದು, ಕೆಲಸಕ್ಕೆ ಗೈರು ಹಾಜರಾಗುವುದು, ಕೆಲಸದಲ್ಲಿ ನಿರಾಸಕ್ತಿ, ವ್ಯಾಪಾರದಲ್ಲಿ ನಷ್ಟ, ವಿಪರೀತ ಸಾಲ ಮತ್ತು ಅಪರಾಧ ಪ್ರಕರಣಗಳ ಕುರಿತಾಗಿ ದತ್ತಾಂಶವನ್ನು ನೀಡಲಾಗಿದೆ. ಈ ದತ್ತಾಂಶಗಳ ಆಧಾರದಲ್ಲಿ ವಿಶ್ಲೇಷಣೆ ಮತ್ತು ವಿವರಣೆಗಳನ್ನು ನೀಡಲಾಗಿದೆ.

**ಕೋಷ್ಟಕ 2.1 – ಸೂಚನದಾರರ ಮದ್ಯವ್ಯಸನದಿಂದಾಗಿ ಉಂಟಾಗುವ ಸಮಸ್ಯೆಗಳ ವಿವರ**

| ಕ್ರಮ ಸಂಖ್ಯೆ | ಸಮಸ್ಯೆಗಳು | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಅನಾರೋಗ್ಯ | 10 | 33.33 |
| 2. | ಸಂಶಯ ಪ್ರವೃತ್ತಿ/ಖಿನ್ನತೆ | 6 | 20.00 |
| 3. | ಹಸಿವು ಇಲ್ಲದಿರುವುದು | 7 | 23.33 |
| 4. | ಮೊದಲಿನ ಎರಡು | 4 | 13.34 |
| 5. | ಎಲ್ಲವೂ | 3 | 10.00 |
| | **ಒಟ್ಟು** | **30** | **100.00** |

ಕೋಷ್ಟಕ 2.1 – ಮದ್ಯಪಾನದಿಂದ ಉಂಟಾಗುವ ಸಮಸ್ಯೆಗಳ ಬಗ್ಗೆ ವಿವರ ನೀಡುತ್ತದೆ. ಪ್ರಶ್ನಾವಳಿ ಮೂಲಕ ಸೂಚನದಾರರಲ್ಲಿ ಕೇಳಿದಾಗ ಮದ್ಯವ್ಯಸನಕ್ಕೆ ಒಳಗಾದ ಸಂದರ್ಭದಲ್ಲಿ ಸುಮಾರು 10(33.33%) ಸೂಚನದಾರರಿಗೆ ಆಗಾಗ ನಿಶ್ಯಕ್ತಿ, ಸುಸ್ತು, ವಾಂತಿ ಇತ್ಯಾದಿ ಅನಾರೋಗ್ಯ ಸಮಸ್ಯೆಗಳು ಕಂಡುಬಂದಿದ್ದವು. 06(20%) ಸೂಚನದಾರರಿಗೆ ಮನೆಯವರ ಮೇಲೆ ಸಂಶಯ ಮತ್ತು ತನ್ನ ಮೇಲೆ ಬೇಸರ ಆಗುತ್ತಿತ್ತು. 07(23.33%) ಸೂಚನದಾರರಿಗೆ ಕುಡಿಯುತ್ತಾ ಇರಬೇಕು ಎಂಬ ತವಕ ಮತ್ತು ಹಸಿವು ಕಡಿಮೆ ಇರುವ ಅಂಶವನ್ನು ಗಮನಿಸಲಾಗಿದೆ. ಇನ್ನೂ 04(13.34%) ಸೂಚನದಾರರಿಗೆ ಆಗಾಗ ಅನಾರೋಗ್ಯ, ಸಂಶಯ ಪ್ರವೃತ್ತಿ, ಖಿನ್ನತೆ ಅಗುತ್ತಿತ್ತು. ಕೇವಲ 03(10%) ಸೂಚನದಾರರಿಗೆ ಮೇಲಿನ ಎಲ್ಲಾ ಸಮಸ್ಯೆಗಳು ಕಂಡುಬರುತ್ತಿತ್ತು. ಒಟ್ಟಾರೆಯಾಗಿ ಮದ್ಯವ್ಯಸನಕ್ಕೆ ಬಲಿಯಾದಾಗ ದೈಹಿಕ ಮತ್ತು ಮಾನಸಿಕ ಆರೋಗ್ಯ ಉತ್ತಮವಾಗಿರುವುದಿಲ್ಲ ಎಂಬ ಅಂಶವನ್ನು ಪ್ರಸ್ತುತ ಅಧ್ಯಯನದಲ್ಲಿ ಗಮನಿಸಲಾಗಿದೆ.

**ಕೋಷ್ಟಕ 2.2 – ಸೂಚನದಾರರ ಶರೀರದ ತೂಕದಲ್ಲಿನ ವ್ಯತ್ಯಾಸದ ಕುರಿತು ವಿವರ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 22 | 73.33 |
| 2. | ಇಲ್ಲ | 08 | 26.67 |
| | **ಒಟ್ಟು** | **30** | **100.00** |

ಕೋಷ್ಟಕ 2.2 – ಮದ್ಯವ್ಯಸನಕ್ಕೆ ಒಳಗಾದ ವ್ಯಕ್ತಿಗಳ ಶರೀರದ ತೂಕದಲ್ಲಿನ ವ್ಯತ್ಯಾಸವನ್ನು ತಿಳಿಸುತ್ತದೆ. ಅತೀ ಹೆಚ್ಚು ಎಂದರೆ 22(73.33%) ಸೂಚನದಾರರು ಕುಡಿಯುತ್ತಿದ್ದಾಗ ಆರೋಗ್ಯದಲ್ಲಿನ ಏರುಪೇರಿನಿಂದಾಗಿ ದೇಹದ ತೂಕವು ಕಡಿಮೆಯಾಗುತ್ತಿತ್ತು ಎಂದು ಹೇಳಿದರೆ, ಕೇವಲ 08(26.67%) ಸೂಚನದಾರರ ದೇಹದ ತೂಕವು ಸಮಸ್ಥಿತಿಯಲ್ಲಿ ಇತ್ತು ಎಂದು ಅಭಿಪ್ರಾಯ ತಿಳಿಸುತ್ತಾರೆ. ಕುಡಿತದಿಂದ ದೇಹದ ಮೇಲೆ ವಿಪರೀತ ಪರಿಣಾಮ ಉಂಟಾಗುತ್ತದೆ ಎಂದು ಈ ಅಧ್ಯಯನದಿಂದ ತಿಳಿಯಬಹುದು.

**ಕೋಷ್ಟಕ 2.3 – ಸೂಚನದಾರರು ಮದ್ಯದ ಅಮಲಿನಿಂದಾಗಿ ಅಪಘಾತವಾಗಿ ಆಸ್ಪತ್ರೆಗೆ ದಾಖಲಾತಿಯಾದ ಪ್ರಮಾಣ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 04 | 13.33 |
| 2. | ಇಲ್ಲ | 26 | 86.67 |
| | **ಒಟ್ಟು** | **30** | **100.00** |

ಕೋಷ್ಟಕ 2.3 – ಮದ್ಯದ ಅಮಲಿನಿಂದಾಗಿ ಅಪಘಾತವಾಗಿ ಆಸ್ಪತ್ರೆಗೆ ಸೇರಿದವರ ಬಗ್ಗೆ ವಿವರ ನೀಡುತ್ತದೆ. 26(86.67%) ಸೂಚನದಾರರು ಯಾವುದೇ ರೀತಿಯ ಅಪಘಾತಗಳು ನಮಗೆ ಆಗದೇ ಆಸ್ಪತ್ರೆಗೆ ದಾಖಲಾಗಿರುವುದಿಲ್ಲ ಎಂದಿದ್ದಾರೆ ಮತ್ತು ಹೆಚ್ಚಾಗಿ ತಾವು ಮನೆಯಲ್ಲೇ ಕುಡಿದು ಗಲಾಟೆ ಮಾಡುತ್ತಾ ಬಿದ್ದಿರುತ್ತಿದ್ದೆವು ಎಂದು ತಿಳಿಸಿದ್ದಾರೆ. ಆದರೆ 04(13.33%) ಸೂಚನದಾರರು ಮದ್ಯದ ಅಮಲಿನಿಂದಾಗಿ ಸಣ್ಣ ಅಪಘಾತವಾಗಿ ಚಿಕಿತ್ಸೆಗಾಗಿ ಆಸ್ಪತೆಗೆ ದಾಖಲಾಗಿರುತ್ತೇವೆ. ಎಂದು ಅಭಿಪ್ರಾಯಪಟ್ಟರು. ವಿಪರೀತ ಕುಡಿತದಿಂದ ಜೀವಕ್ಕೆ ಹಾನಿಯಾಗುವ ಅಂಶ ಈ ದತ್ತಾಂಶಗಳಿಂದ ತಿಳಿಯಬಹುದು.

**ಕೋಷ್ಟಕ 2.4 – ಮದ್ಯಪಾನಕ್ಕಾಗಿ ಮನೆಯ ವಸ್ತುಗಳನ್ನು ಗಿರವಿ ಇಟ್ಟವರ ವಿವರ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 17 | 56.67 |
| 2. | ಇಲ್ಲ | 13 | 43.33 |
| | **ಒಟ್ಟು** | **30** | **100.00** |

ಕೋಷ್ಟಕ 2.4 – ಮದ್ಯಪಾನಕ್ಕಾಗಿ ಮನೆಯ ವಸ್ತುಗಳನ್ನು ಗಿರವಿ ಇಟ್ಟವರ ಬಗ್ಗೆ ತಿಳಿಸುತ್ತದೆ. ಸುಮಾರು 17(56.67%) ಕುಡಿಯಲು ಹಣ ಇಲ್ಲದ ಸಂದರ್ಭದಲ್ಲಿ ಹೆಂಡತಿಯ ಒಡವೆ, ದ್ವಿಚಕ್ರ ವಾಹನ, ಭತ್ತ, ಇತ್ಯಾದಿ ವಸ್ತುಗಳನ್ನು ಗಿರವಿ ಇಟ್ಟಿದ್ದಾರೆ. 13(43.33%) ಸೂಚನದಾರರು ಕುಡಿಯುವುದಕ್ಕಾಗಿ ಯಾವುದೇ ಮನೆಯ ವಸ್ತುಗಳನ್ನು ಗಿರವಿ ಇಡದೇ ಆದರೆ ಸಂಪಾದನೆಯ ಎಲ್ಲಾ ಹಣವನ್ನು ಖರ್ಚು ಮಾಡಿ ಸಾಲಗಾರರಾಗಿದ್ದರು.

**ಕೋಷ್ಟಕ 2.5 – ಮದ್ಯಪಾನಿಗಳ ಸಂಗಾತಿಗಳ ನಡುವಣ ಸಂಬಂಧ**

| ಕ್ರಮ ಸಂಖ್ಯೆ | ಸಂಬಂಧ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಚೆನ್ನಾಗಿದೆ | 07 | 20.00 |
| 2. | ಆಗಾಗ್ಗೆ ಜಗಳವಾಗುತ್ತದೆ | 09 | 30.00 |
| 3. | ಅಸಹಕಾರ ಪ್ರವೃತ್ತಿ | 02 | 6.66 |
| 4. | ಮನೆಬಿಟ್ಟು ಹೋಗುತ್ತೇನೆಂದು ಹೇಳುತ್ತಾರೆ | – | – |
| 5. | ವಿಚ್ಛೇದನ ನೀಡುತ್ತೇನೆಂದು ಹೇಳುತ್ತಾರೆ | – | – |
| 6. | ಎರಡು ಮತ್ತು ಮೂರು | 03 | 10.00 |
| 7. | ಎರಡು, ಮೂರು ಮತ್ತು ನಾಲ್ಕು | 02 | 6.67 |
| 8. | ಅನ್ವಯ ಆಗುವುದಿಲ್ಲ | 08 | 26.67 |
|  | **ಒಟ್ಟು** | **30** | **100.00** |

ಕೋಷ್ಟಕ 2.5 – ಮದ್ಯಪಾನಿಗಳ ಸಂಗಾತಿಗಳ ನಡುವಣ ಸಂಬಂಧಗಳ ಬಗ್ಗೆ ಸುಮಾರು 9(30%) ಸೂಚನದಾರರು ಕುಡಿದ ನಂತರ ತಮ್ಮ ಸಂಗಾತಿಯ ಜೊತೆ ಪ್ರತಿ ದಿನವೂ ಜಗಳವಾಡುತ್ತಿದ್ದರು. ಹೆಚ್ಚಾಗಿ ಮಡದಿಯರು ದೈಹಿಕ ಮತ್ತು ಮಾನಸಿಕ ಹಿಂಸೆಗಳಿಗೂ ಬಲಿಯಾಗುತ್ತಿದ್ದರು. 08(26.67%) ಸೂಚನದಾರರು ಮದುವೆಯಾಗದ ಕಾರಣ ಇದು ಅನ್ವಯವಾಗುವುದಿಲ್ಲ. ಆದರೆ 06(20%) ಸೂಚನದಾರರು ಮತ್ತು ಅವರ ಸಂಗಾತಿಯ ನಡುವೆ ಸಂಬಂಧ ಚೆನ್ನಾಗಿತ್ತು ಎಂದು ಅವರು ತಿಳಿಸುತ್ತಾರೆ. 02(6.67%) ಸೂಚನದಾರರಿಗೆ ಅವರ ಮಡದಿ ಅಸಹಕಾರವನ್ನು ತೋರಿಸುತ್ತಿದ್ದರು. 3(10%) ಸೂಚನದಾರರಿಗೆ ಅಸಹಕಾರ ಹಾಗೂ ಅವರ ಮಡದಿ ಇವರ ಹಿಂಸೆ ತಾಳದೆ ಮನೆ ಬಿಟ್ಟು ಹೋಗುತ್ತೇನೆಂದು ಹೇಳಿರುತ್ತಾರೆ. ಒಟ್ಟಾರೆಯಾಗಿ ಮದ್ಯವ್ಯಸನದಿಂದ ವ್ಯಕ್ತಿಯು ಹಾಳಾಗುವುದಲ್ಲದೇ ಆತನ ಸಂಸಾರವು ಬೀದಿಪಾಲಾಗುವ ಅಂಶವು ಪ್ರಸ್ತುತ ಅಧ್ಯಯನದಿಂದ ಗಮನಿಸಬಹುದು.

**ಕೋಷ್ಟಕ 2.6 – ಮದ್ಯಪಾನವು ಸೂಚನದಾರರ ಮಕ್ಕಳ ಮೇಲೆ ಬೀರಿದ ಪ್ರಭಾವ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | – | – |
| 2. | ಇಲ್ಲ | 22 | 73.33 |
| 3. | ಅನ್ವಯವಾಗುವುದಿಲ್ಲ | 08 | 26.67 |
| | **ಒಟ್ಟು** | 30 | 100.00 |

ಕೋಷ್ಟಕ 2.6 – ಮದ್ಯಪಾನವು ಸೂಚನದಾರರ ಮಕ್ಕಳ ಮೇಲೆ ಪ್ರಭಾವ ಬೀರಿದ ಬಗ್ಗೆ ವಿವರಣೆ ನೀಡುತ್ತದೆ. ಸುಮಾರು 08(26.67%) ಸೂಚನದಾರರು ಮದುವೆಯಾಗದ ಕಾರಣ ಇದು ಅನ್ವಯವಾಗುವುದಿಲ್ಲ. ನಮ್ಮ ಪ್ರಭಾವದಿಂದ ಮಕ್ಕಳು ಮದ್ಯಪಾನ ಅಭ್ಯಾಸ ಮಾಡುತ್ತಿಲ್ಲ ಎಂದು ಬಹುಪಾಲು ಸೂಚನದಾರರು 22(73.33%) ಹೇಳುತ್ತಾರೆ.

**ಕೋಷ್ಟಕ 2.7 – ಮದ್ಯಪಾನ ಮಾಡುತ್ತಿದ್ದಾಗ ಸೂಚನದಾರರ ಮತ್ತು ಮಕ್ಕಳ ಜೊತೆಗಿನ ಸಂಬಂಧ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಚೆನ್ನಾಗಿದೆ | 07 | 23.34 |
| 2. | ಜಗಳವಾಡುತ್ತಾರೆ | 01 | 3.34 |
| 3. | ತಾತ್ಸಾರ ಭಾವನೆ | 01 | 3.33 |
| 4. | ಮದ್ಯಪಾನ ವಿರೋಧಿಸುತ್ತಾರೆ | 01 | 3.33 |
| 5. | ಎರಡು ಮತ್ತು ಮೂರು | 02 | 6.67 |
| 6. | ಎರಡು, ಮೂರು ಮತ್ತು ನಾಲ್ಕು | 10 | 33.33 |
| 7. | ಅನ್ವಯವಾಗುವುದಿಲ್ಲ | 08 | 26.66 |
| | **ಒಟ್ಟು** | 30 | 100.00 |

ಕೋಷ್ಟಕ 2.7 - ಸೂಚನದಾರರು ಮದ್ಯಪಾನಕ್ಕೆ ಒಳಗಾದ ಸಂದರ್ಭದಲ್ಲಿ ಅವರ ಮತ್ತು ಮಕ್ಕಳ ಜೊತೆಗಿನ ಸಂಬಂಧದ ಬಗ್ಗೆ ತಿಳಿಸುತ್ತದೆ. ಸುಮಾರು 07(23.34%) ಸೂಚನದಾರರ ಸಂಬಂಧ ಚೆನ್ನಾಗಿತ್ತು. 08(26.66%) ಸೂಚನದಾರರು ಮದುವೆಯಾಗದ ಕಾರಣ ಇದು ಅನ್ವಯವಾಗುವುದಿಲ್ಲ. ಇನ್ನುಳಿದಂತೆ 15(50%) ಸೂಚನದಾರರ ಮಕ್ಕಳು ಇವರೊಂದಿಗೆ ಜಗಳವಾಡುತ್ತಿದ್ದರು. ಮದ್ಯಪಾನ ವಿರೋಧಿಸುತ್ತಾ ತಂದೆಯ ಬಗ್ಗೆ ತಾತ್ಸಾರ ಭಾವನೆ ಮತ್ತು ಬೇಸರ ಮಾಡುತ್ತಿದ್ದರು. ಮದ್ಯಪಾನವು ಮಕ್ಕಳ ಮೇಲೆ ಕೂಡ ವ್ಯತಿರಿಕ್ತ ಪರಿಣಾಮ ಬೀರುವ ವಿಚಾರವನ್ನು ಈ ಅಧ್ಯಯನದಿಂದ ಕಂಡುಕೊಳ್ಳಬಹುದು.

**ರೇಖಾಚಿತ್ರ 2.8 (B) –ಮದ್ಯವ್ಯಸನದಿಂದಾಗಿ ಸೂಚನದಾರ ಶೇಕಡವಾರು ಸಾಮಾಜಿಕ ಸ್ಥಾನಮಾನದ ಸ್ಥಿತಿಗತಿ**




ರೇಖಾಚಿತ್ರ 2.8(B) - ಸೂಚನದಾರರು ಮದ್ಯವ್ಯಸನಕ್ಕೆ ಒಳಗಾದ ಸಂದರ್ಭದಲ್ಲಿ ಅವರ ಸಾಮಾಜಿಕ ಸ್ಥಾನಮಾನ ಹೇಗಿತ್ತು ಎಂಬುದನ್ನು ತಿಳಿಸುತ್ತದೆ. ಬಹುಪಾಲು 26(86.67%) ಸೂಚನದಾರರಿಗೆ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನ ಇರಲಿಲ್ಲ. ಕುಡುಕ ಎಂಬ ಕಾರಣಕ್ಕೆ ಸಮಾಜ ಇವರನ್ನು ತಿರಸ್ಕರಿಸುತ್ತಿತ್ತು. ಎಲ್ಲರೂ ಇವರ ಬಗ್ಗೆ ಟೀಕಿಸುತ್ತಿದ್ದರು. ಯಾರಿಗೂ ಬೇಡವಾದ ವ್ಯಕ್ತಿಯಾಗಿದ್ದರು. 04(13.33%) ಸೂಚನದಾರರು ಸಾಮಾಜಿಕ ಸ್ಥಾನಮಾನ ಸ್ವಲ್ಪ ಮಟ್ಟಿಗೆ ಒಳ್ಳೆಯದಾಗಿತ್ತು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ಕೋಷ್ಟಕ 2.9 – ಮದ್ಯಪಾನದಿಂದಾಗಿ ಕೆಲಸಕ್ಕೆ ಗೈರು ಹಾಜರಾದ ವಿವರ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 18 | 60.00 |
| 2. | ಇಲ್ಲ | 12 | 40.00 |
| | **ಒಟ್ಟು** | **30** | **100.00** |

ಕೋಷ್ಟಕ 2.9 – ಮದ್ಯಪಾನದಿಂದಾಗಿ ಕೆಲಸಕ್ಕೆ ಗೈರು ಹಾಜರಾದವರ ಬಗ್ಗೆ ತಿಳಿಸುತ್ತದೆ. ಸುಮಾರು 18(60%) ಸೂಚನದಾರರು ಮದ್ಯವ್ಯಸನದಿಂದಾಗಿ ತಮ್ಮ ದೈನಂದಿನ ಕೃಷಿ, ಕೂಲಿ, ವ್ಯಾಪಾರ ಇತ್ಯಾದಿ ಕೆಲಸಗಳಿಗೆ ಗೈರು ಹಾಜರಾಗುತ್ತಿದ್ದರು. 12(40%) ಸೂಚನದಾರರು ಮಾತ್ರ ಕೆಲಸಕ್ಕೆ ಗೈರು ಹಾಜರಾಗುತ್ತಿರಲಿಲ್ಲ. ಆದರೆ ಕೆಲಸದಲ್ಲಿ ಉತ್ತಮ ನಿರ್ವಹಣೆ ತೋರಿಸಲು ಸಾಧ್ಯವಾಗುತ್ತಿರಲಿಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ.

**ಕೋಷ್ಟಕ 2.10 – ಮದ್ಯವ್ಯಸನದಿಂದಾಗಿ ಸೂಚನದಾರರು ಕೆಲಸದಿಂದ ಅಮಾನತುಗೊಂಡವರ ವಿವರ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 22 | 73.33 |
| 2. | ಇಲ್ಲ | – | – |
| 3. | ಅನ್ವಯವಾಗುವುದಿಲ್ಲ | 08 | 26.67 |
| | **ಒಟ್ಟು** | **30** | **100.00** |

ಕೋಷ್ಟಕ 2.10 – ಮದ್ಯವ್ಯಸನದಿಂದ ಸೂಚನದಾರರು ಕೆಲಸದಿಂದ ಅಮಾನತುಗೊಂಡ ಬಗ್ಗೆ ವಿವರ ನೀಡುತ್ತದೆ. ಸುಮಾರು 22(73.33%) ಸೂಚನದಾರರನ್ನು ಸರ್ಕಾರಿ ವೃತ್ತಿಯಿಂದ, ಕೂಲಿ ಕೆಲಸಗಳಾದ ಪೈಂಟಿಂಗ್, ಡ್ರೈವಿಂಗ್ ಹಾಗೂ ಮರದ ಕೆಲಸ ಇತ್ಯಾದಿ ಕೆಲಸಗಳಿಗೆ ಆಗಾಗ ಗೈರು ಹಾಜರಾಗುತ್ತಿದ್ದರಿಂದ ಕೆಲಸದಿಂದ ಅಮಾನತುಗೊಳಿಸಲಾಗಿದೆ. 08(26.67%) ಸೂಚನದಾರರು ಸ್ವಂತ ಕೃಷಿಯನ್ನು ಮಾಡುತ್ತಿರುವುದರಿಂದ ಅವರಿಗೆ ಅನ್ವಯವಾಗುವುದಿಲ್ಲ.

## ರೇಖಾಚಿತ್ರ 2.11(B)

## ಮದ್ಯಪಾನದಿಂದಾಗಿ ಶೇಕಡವಾರು ಸೂಚನದಾರರ ಕೆಲಸ ಕಾರ್ಯದಲ್ಲಿ ಆದ ಬದಲಾವಣೆಯ ಬಗ್ಗೆ ವಿವರ




ರೇಖಾಚಿತ್ರ 2.11(B)– ಮದ್ಯಪಾನದಿಂದಾಗಿ ಸೂಚನದಾರರ ದೈನಂದಿನ ಕೆಲಸ ಕಾರ್ಯದಲ್ಲಾದ ಬದಲಾವಣೆಯ ಬಗ್ಗೆ ಹೇಳುತ್ತದೆ. 20(66.67%) ಸೂಚನದಾರರಿಗೆ ಕುಡಿದ ಮೇಲೆ ಕೃಷಿ, ಕೂಲಿ, ವ್ಯಾಪಾರ ಅಥವಾ ಇತರೇ ಯಾವುದೇ ಕೆಲಸದಲ್ಲಿ ಆಸಕ್ತಿ ಇಲ್ಲ ಎಂದು ಹೇಳಿರುತ್ತಾರೆ. 10(33.33%) ಸೂಚನದಾರರು ಆಸಕ್ತಿ ಎಂದಿನಂತೆ ಇತ್ತು. ಆದರೆ ಆರೋಗ್ಯದ ಏರುಪೇರಿನಿಂದಾಗಿ ಪರಿಣಾಮಕಾರಿಯಾಗಿ ಕೆಲಸ ಮಾಡಲು ಆಗುತ್ತಿಲ್ಲ ಎಂದು ತಿಳಿಸಿರುತ್ತಾರೆ.

## ಕೋಷ್ಟಕ 2.12–ಮದ್ಯಪಾನದಿಂದಾಗಿ ಸೂಚನದಾರರ ವ್ಯಾಪಾರದಲ್ಲಿ ಆದ ನಷ್ಟದ ಬಗ್ಗೆ ವಿವರ

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 01 | 3.33 |
| 2. | ಅನ್ವಯವಾಗುವುದಿಲ್ಲ | 29 | 96.67 |
| | ಒಟ್ಟು | 30 | 100.00 |

ಕೋಷ್ಟಕ 2.12 – ಮದ್ಯಪಾನದಿಂದಾಗಿ ಸೂಚನದಾರರಿಗೆ ವ್ಯಾಪಾರದಲ್ಲಿ ಆದ ನಷ್ಟಗಳ ಬಗ್ಗೆ ತಿಳಿಸುತ್ತದೆ. ಇಲ್ಲಿ ಸುಮಾರು 29(96.67%) ಸೂಚನದಾರರು ಕೃಷಿ, ಕೂಲಿ ಮತ್ತು ಇತರೇ ಕೆಲಸಗಳಲ್ಲಿ ತೊಡಗಿರುವ ಕಾರಣ ನಷ್ಟಗಳು ಆಗಿರುವುದಿಲ್ಲ. 01(3.33%) ಸೂಚನದಾರರು ಮಾತ್ರ ವ್ಯಾಪಾರದಲ್ಲಿ ತೊಡಗಿರುವ ಕಾರಣ ಅವರ ಗೈರು ಹಾಜರಿಯ ಕಾರಣ ವ್ಯಾಪಾರದಲ್ಲಿ ನಷ್ಟವಾಗಿದೆ.

**ಕೋಷ್ಟಕ 2.13 – ಮದ್ಯವ್ಯಸನದಿಂದಾಗಿ ಹೆಚ್ಚುವರಿ ಸಾಲದ ಹೊರೆಯ ವಿವರ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 21 | 70.00 |
| 2. | ಇಲ್ಲ | 09 | 30.00 |
| | **ಒಟ್ಟು** | **30** | **100.00** |

ಕೋಷ್ಟಕ 2.13 – ಮದ್ಯವ್ಯಸನದಿಂದಾಗಿ ಸೂಚನದಾರರಿಗೆ ಮಾಡಿಕೊಂಡ ಸಾಲದ ವಿವರವನ್ನು ತಿಳಿಸುತ್ತದೆ. 21(70%) ಸೂಚನದಾರರು ಕುಡಿಯುವುದಕ್ಕಾಗಿ ಮನೆಯ ವಸ್ತುಗಳನ್ನು ಅಡವಿಡುವುದರ ಜೊತೆಗೆ ವ್ಯಕ್ತಿ ಮತ್ತು ಸಂಸ್ಥೆಗಳಿಂದ ಕುಡಿಯುವುದಕ್ಕಾಗಿ ಸಾಲವನ್ನು ಮಾಡಿರುತ್ತಾರೆ. ಕೇವಲ 09(30%) ಸೂಚನದಾರರು ಸಾಲವನ್ನು ಮಾಡಿರುವುದಿಲ್ಲ. ಮದ್ಯವ್ಯಸನಿಗಳು ಆರ್ಥಿಕ ಸಂಕಷ್ಟಕ್ಕೆ ಗುರಿಯಾಗಿ ಸಾಲಗಾರರಾಗುವ ಅಂಶವು ಅಧ್ಯಯನದಲ್ಲಿ ಕಾಣುತ್ತದೆ.

**ಕೋಷ್ಟಕ 2.14 – ಮದ್ಯಪಾನದಿಂದ ಸೂಚನದಾರರು ಮಾಡಿದ ಅಪರಾಧ ಪ್ರಕರಣಗಳ ವಿವರ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 08 | 26.67 |
| 2. | ಇಲ್ಲ | 22 | 73.33 |
| | **ಒಟ್ಟು** | **30** | **100.00** |

ಕೋಷ್ಟಕ 2.14 – ಸೂಚನದಾರರು ಮದ್ಯಪಾನದಿಂದ ಮಾಡಿದ ತಪ್ಪು/ಅಪರಾಧ ಪ್ರಕರಣಗಳ ಬಗ್ಗೆ ವಿವರಣೆ ನೀಡುತ್ತದೆ. ಸುಮಾರು 22(73.33%) ಸೂಚನದಾರರು ಕುಟುಂಬದಲ್ಲಿ ಜಗಳ ಮಾಡುತ್ತಾ ಇರುತ್ತಿದ್ದರು. ಆದರೆ ಯಾವುದೇ ರೀತಿಯ ಅಪರಾಧ ಪ್ರಕರಣಗಳಲ್ಲಿ ಭಾಗಿಯಾಗಿರುವುದಿಲ್ಲ. ಆದರೆ 08(26.67%) ಸೂಚನದಾರರು ಮಡದಿಯೊಂದಿಗೆ ಅಕ್ಕ-ಪಕ್ಕದ ಮನೆಯವರೊಂದಿಗೆ ಹಾಗೂ ದಾಯಾದಿಗಳೊಂಗೆ ಜಗಳ ಮಾಡಿ ಆರಕ್ಷಕ ಠಾಣೆಗಳಲ್ಲಿ ಪ್ರಕರಣಗಳು ದಾಖಲಾಗಿ ಕೊನೆಗೆ ಎಚ್ಚರಿಕೆ ಮತ್ತು ರಾಜಿಯ ಮೂಲಕ ಇತ್ಯರ್ಥಗೊಂಡಿರುವುದನ್ನು ಅವಲೋಕಿಸಲಾಗಿದೆ. ಒಟ್ಟಿನಲ್ಲಿ ಮದ್ಯಪಾನದಿಂದ ಸಾಮಾಜಿಕ ಶಾಂತಿಯು ಹದಗೆಡುವ ಅಂಶವನ್ನು ಅಧ್ಯಯನವು ತೋರಿಸುತ್ತದೆ.

ಮೇಲಿನ ವಿಭಾಗದಲ್ಲಿ ಬಹುಪಾಲು ಸೂಚನದಾರರ ಮಾಹಿತಿಯಂತೆ ಮತ್ತು ಕ್ಷೇತ್ರಾಧ್ಯಯನದಲ್ಲಿ ಅವಲೋಕಿಸಿದಂತೆ ಹೆಚ್ಚಿನವರಿಗೆ ಮದ್ಯಪಾನದ ನಂತರ ಅನಾರೋಗ್ಯ, ಶರೀರದ ತೂಕದಲ್ಲಿ ಇಳಿತ, ನಿಶ್ಯಕ್ತಿ, ಮನಸ್ಸಿಗೆ ಕಿರಿಕಿರಿ ಆಗುತ್ತಿತ್ತು. ಕುಡಿಯುವುದಕ್ಕಾಗಿ ಮನೆಯ ವಸ್ತುಗಳನ್ನು ಗಿರವಿ ಇಡುತ್ತಿದ್ದರು. ಮದ್ಯಪಾನದ ನಂತರ ಮನೆಗೆ ಬಂದು ಮಡದಿ, ಮಕ್ಕಳ ಜೊತೆ ಜಗಳ ಮಾಡುತ್ತಾ ದೈಹಿಕ ಮತ್ತು ಮಾನಸಿಕ ಹಿಂಸೆಯನ್ನು ನೀಡುತ್ತಿದ್ದರು. ಇದರಿಂದಾಗಿ ಮಕ್ಕಳು ಮತ್ತು ಮಡದಿ ಸೂಚನದಾರರನ್ನು ದ್ವೇಷಿಸುತ್ತಾ ಅಶಾಂತಿಯ ಜೀವನವನ್ನು ನಡೆಸುತ್ತಿದ್ದರು. ಇದಲ್ಲದೇ ಮದ್ಯವ್ಯಸನದಿಂದಾಗಿ ಸೂಚನದಾರರಿಗೆ ಸಮಾಜದಲ್ಲಿ ಗೌರವ ಸಿಗುತ್ತಿರಲಿಲ್ಲ. ಎಲ್ಲರೂ ಅವಹೇಳನ ಮಾಡುತ್ತಾ ಇವರನ್ನು ಟೀಕಿಸುತ್ತಿದ್ದರು. ವಿಪರೀತ ಮದ್ಯಪಾನದಿಂದಾಗಿ ಸೂಚನದಾರರು ಕೆಲಸವನ್ನು ಸರಿಯಾಗಿ ಮಾಡಲಿಕ್ಕೆ ಆಗದೇ ಗೈರು ಹಾಜರಾಗುತ್ತಿದ್ದರು. ಪುನಃ ಕುಡಿಯುವುದಕ್ಕಾಗಿ ಹಾಗೂ ಮನೆಯ ವ್ಯವಹಾರಕ್ಕಾಗಿ ಸಾಲವನ್ನು ಮಾಡಿ ಸಂಕಷ್ಟದಲ್ಲಿರುವ ಅಂಶ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

# ಅಧ್ಯಾಯ–೪

# ಮದ್ಯವ್ಯಸನ ವಿಮುಕ್ತಿಯಚಿಕಿತ್ಸಾ ವಿಧಾನಗಳು ಮತ್ತು ಪರಿಣಾಮಗಳು

(ಮಾಹಿತಿ ವಿಶ್ಲೇಷಣೆ)

## ಅಧ್ಯಾಯ – ೪

# ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳು ಮತ್ತು ಪರಿಣಾಮಗಳು

(ಮಾಹಿತಿ ವಿಶ್ಲೇಷಣೆ)

ಈ ಅಧ್ಯಾಯದಲ್ಲಿ ಸೂಚನದಾರರು ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ಬಳಸಿದ ಚಿಕಿತ್ಸಾ ವಿಧಾನಗಳು ಮತ್ತು ಅದರ ವಿಧಗಳ ಕುರಿತಾಗಿ ಚರ್ಚಿಸಲಾಗಿದೆ. ಇವುಗಳಲ್ಲಿ ಮುಖ್ಯವಾಗಿ ವೈದ್ಯಕೀಯ ಚಿಕಿತ್ಸೆ, ಸಮುದಾಯ ಶಿಬಿರಗಳು, ಅನಾಮಿಕ ಅಮಲಿಗಳು ನಡೆಸುವ ಸಭೆಗಳ ಮೂಲಕ ಮಾಡುವ ಮನಪರಿವರ್ತನೆ, ಔಷಧಿಯ ಪ್ರಮಾಣ, ಕೌಟುಂಬಿಕ ಗುಂಪು ಚಿಕಿತ್ಸೆ, ಆಪ್ತ ಸಮಾಲೋಚನೆ ಇತ್ಯಾದಿ ವಿಚಾರಗಳು ಒಳಗೊಂಡಿವೆ.

### ರೇಖಾಚಿತ್ರ 3.1 (C)

### ಶೇಕಡವಾರು ಸೂಚನದಾರರು ಪಡೆದುಕೊಂಡ ವಿವಿಧ ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳ ವಿವರ



ರೇಖಾಚಿತ್ರ 3.1(C)– ಮದ್ಯವ್ಯಸನ ವಿಮುಕ್ತಿಯ ಬೇರೆ ಬೇರೆ ವಿಧಾನಗಳನ್ನು ವಿವರಿಸುತ್ತದೆ. ಸುಮಾರು 10(33.33%) ಸೂಚನದಾರರು ಆಸ್ಪತ್ರೆಗೆ ದಾಖಲಾಗಿ ವೈದ್ಯಕೀಯ ಸಾಮಾಜಿಕ ಚಿಕಿತ್ಸೆಗಳಾದ ಔಷಧಿ ಮತ್ತು ಆಪ್ತ/ಗುಂಪು ಸಮಾಲೋಚನೆಯ ಮೂಲಕ ಮದ್ಯವ್ಯಸನದಿಂದ ವಿಮುಕ್ತಿಗೊಂಡಿರುತ್ತಾರೆ. 10(33.33%) ಸೂಚನದಾರರು ಬರೇ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆಯ ಮುಖಂಡತ್ವದಲ್ಲಿ ನಡೆಯುವ ಜನಜಾಗೃತಿ ವೇದಿಕೆ ಶಿಬಿರಗಳಲ್ಲಿ ಭಾಗವಹಿಸಿ ಔಷಧಿ, ಮನಪರಿವರ್ತನೆಯ ಮೂಲಕ ವಿಮುಕ್ತರಾಗಿದ್ದು, 10(33.34%) ಸೂಚನದಾರರು ವಿಶೇಷವಾಗಿ ಯಾವುದೇ ವೈದ್ಯಕೀಯ ಚಿಕಿತ್ಸೆಯನ್ನು ಪಡೆಯದೇ ಸ್ವ ಇಚ್ಛೆಯಿಂದ ಅನಾಮಿಕ ಅಮಲಿಗಳು ವಾರಕ್ಕೊಮ್ಮೆ ನಡೆಸುವ ಸಭೆಗಳಲ್ಲಿ ಭಾಗವಹಿಸಿ ಅದರಿಂದ ಪ್ರಭಾವಿತಗೊಂಡು ವಿಮುಕ್ತರಾಗಿರುವುದು ವಿಶೇಷವಾಗಿದೆ.

**ಕೋಷ್ಟಕ 3.2–ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ಔಷಧಿಯನ್ನು ಪಡೆದವರ ವಿವರ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 20 | 66.67 |
| 2. | ಇಲ್ಲ | 10 | 33.33 |
| | **ಒಟ್ಟು** | **30** | **100.00** |

ಕೋಷ್ಟಕ 3.2 – ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ಔಷಧಿಯನ್ನು ಪಡೆದುಕೊಂಡಿದ್ದಾರೆಯೇ ಅಥವಾ ಇಲ್ಲವೋ ಎಂಬುದರ ಬಗ್ಗೆ ತಿಳಸುತ್ತದೆ. ಸುಮರು 20(66.67%) ಸೂಚನದಾರರು ಆಸ್ಪತ್ರೆಗೆ ದಾಖಲಾಗಿ ವೈದ್ಯಕೀಯ - ಸಾಮಾಜಿಕ ಚಿಕಿತ್ಸೆ ಹಾಗೂ ಸಮುದಾಯ ಶಿಬಿರಗಳಲ್ಲಿ ಭಾಗವಹಿಸಿ ಔಷಧಿಯನ್ನು ಪಡೆದುಕೊಂಡು ಮದ್ಯವ್ಯಸನದಿಂದ ವಿಮುಕ್ತರಾಗಿರುತ್ತಾರೆ. 10(33.33%)) ಕೇವಲ ಮನಪರಿವರ್ತನೆ, ದೇವರ ಮೇಲಿನ ನಂಬಿಕೆಯಿಂದ ಔಷಧಿಯನು ಪಡೆಯದೇ ವಿಮುಕ್ತರಾಗಿರುತ್ತಾರೆ. ಆತ್ಮವಿಶ್ವಾಸ, ನಂಬಿಕೆ ಮತ್ತು ಮನಪರಿವರ್ತನೆಯ ಮೂಲಕ ಕೂಡ ಮದ್ಯವ್ಯಸನದಿಂದ ವಿಮುಕ್ತಿ ಹೊಂದಬಹುದು ಎಂಬ ಅಂಶವನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಬಹುದು.

### ಕೋಷ್ಟಕ 3.3 – ಕೌಟುಂಬಿಕ-ಗುಂಪು ಚಿಕಿತ್ಸೆಯಲ್ಲಿ ಪಾಲ್ಗೊಂಡವರ ವಿವರ

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 12 | 40.00 |
| 2. | ಇಲ್ಲ | 18 | 60.00 |
| | **ಒಟ್ಟು** | **30** | **100.00** |

ಕೋಷ್ಟಕ 3.3 – ಮಾಹಿತಿದಾರರು ಕೌಟುಂಬಿಕ-ಗುಂಪು ಚಿಕಿತ್ಸೆಯಲ್ಲಿ ಪಾಲ್ಗೊಂಡವರ ಬಗ್ಗೆ ತಿಳಸುತ್ತದೆ. ಕೋಷ್ಟಕವನ್ನು ಗಮನಿಸಿದಾಗ ಸುಮಾರು 18(60%) ಸೂಚನದಾರರು ಆಸ್ಪತ್ರೆಗಳಲ್ಲಿ ಮತ್ತು ಸಮುದಾಯ ಶಿಬಿರಗಳಲ್ಲಿ ನಡೆಸಲಾಗುವ ಕೌಟುಂಬಿಕ ಗುಂಪು ಚಿಕಿತ್ಸೆಯಲ್ಲಿ ಪಾಲ್ಗೊಂಡು ಮದ್ಯವ್ಯಸನದಿಂದ ವಿಮುಕ್ತಿ ಹೊಂದಿರುತ್ತಾರೆ. 12(40%) ಸೂಚನದಾರರು ಕೌಟುಂಬಿಕ ಗುಂಪು ಚಿಕಿತ್ಸೆಯಲ್ಲಿ ಪಾಲ್ಗೊಳ್ಳಲಿಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ.

### ಕೋಷ್ಟಕ 3.4 – ಆಪ್ತ ಸಮಾಲೋಚನೆಯಲ್ಲಿ ಭಾಗವಹಿಸಿದವರ ಕುರಿತು

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 16 | 53.33 |
| 2. | ಇಲ್ಲ | 14 | 46.67 |
| | **ಒಟ್ಟು** | **30** | **100.00** |

ಕೋಷ್ಟಕ 3.4 – ಮಾಹಿತಿದಾರರು ಆಪ್ತ ಸಮಲೋಚನೆಯಲ್ಲಿ ಭಾಗವಹಿಸಿ ಅದರಿಂದ ಪ್ರಯೋಜನ ಪಡೆದ ಕುರಿತಾಗಿರುತ್ತದೆ. ಸುಮಾರು 16(53.33%) ಸೂಚನದಾರರು ನಿರಂತರವಾಗಿ ಮನಪರಿವರ್ತನೆಗಾಗಿ, ಆರೋಗ್ಯ ಸುಧಾರಣೆಗಾಗಿ, ಸಮಸ್ಯೆಗಳನ್ನು ಎದುರಿಸಲು ಮನೋವೈದ್ಯರು ಮತ್ತು ಮನೋ ವೈದ್ಯಕೀಯ ಸಾಮಾಜಿಕ ಕಾರ್ಯಕರ್ತರು ನಡೆಸಲಾಗುವ ಆಪ್ತ ಸಮಾಲೋಚನೆಯಲ್ಲಿ ಭಾಗವಹಿಸಿರುತ್ತಾರೆ. 14(46.67%) ಬೇರೆ ಬೇರೆ ಕಾರಣಾಂತರಗಳಿಂದ ಸೂಚನದಾರರು ಆಪ್ತ ಸಮಾಲೋಚನೆಯಲ್ಲಿ ಪಾಳ್ಗೊಳ್ಳದಿರುವ ವಿಚಾರವನ್ನು ಅವಲೋಕಿಸಲಾಗಿದೆ.

## ಕೋಷ್ಟಕ 3.5 – ವೈದ್ಯಕೀಯ ಚಿಕಿತ್ಸೆಯ ಮೂಲಕ ಮಾತ್ರ ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ಸಾಧ್ಯವಿದೆ ಎಂಬುದರ ಕುರಿತು ಅಭಿಪ್ರಾಯ

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 18 | 60.00 |
| 2. | ಇಲ್ಲ | 12 | 40.00 |
| | ಒಟ್ಟು | 30 | 100.00 |

ಕೋಷ್ಟಕ 3.5 – ವೈದ್ಯಕೀಯ ಚಿಕಿತ್ಸೆಯ ಮೂಲಕ ಮಾತ್ರ ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ಸಾಧ್ಯವಿದೆ ಎಂಬುದರ ಕುರಿತಾಗಿ ಇಲ್ಲಿ ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ 18(60%) ಸೂಚನದಾರರು ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ವೈದ್ಯಕೀಯ ಚಿಕಿತ್ಸೆಯು ಅಗತ್ಯವಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಉಳಿದ 12(40%) ಸೂಚನದಾರರು ಬರೀ ವೈದ್ಯಕೀಯ ಚಿಕಿತ್ಸೆಯಿಂದ ವಿಮುಕ್ತಿ ಹೊಂದಲು ಅಸಾಧ್ಯ ಜೊತೆಗೆ ಆಪ್ತ ಸಮಾಲೋಚನೆ, ಆತ್ಮ ವಿಶ್ವಾಸ, ದೃಢ ನಂಬಿಕೆ ಮತ್ತು ಮನಪರಿವರ್ತನೆ ಮುಖ್ಯವಾಗಿದೆ ಎಂಬುದು ಅಧ್ಯಯನವು ದೃಢಪಡಿಸುತ್ತದೆ.

## ಕೋಷ್ಟಕ 3.6 – ಸಮುದಾಯ ಶಿಬಿರಗಳಲ್ಲದೆ ಇತರ ಶಿಬಿರಗಳಲ್ಲಿ ಭಾಗವಹಿಸಿದವರ ವಿವರ

| ಕ್ರಮ ಸಂಖ್ಯೆ | ಶಿಬಿರದ ಹೆಸರು | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|---|
| 1. | ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆಯ ನೇತೃತ್ವದಲ್ಲಿ ನಡೆಯುವ ಜನಜಾಗೃತಿ ವೇದಿಕೆಯ ಶಿಬಿರ | ಹೌದು | 10 | 33.33 |
| 2. | | ಇಲ್ಲ | 20 | 66.67 |
| | | ಒಟ್ಟು | 30 | 100.00 |

ಕೋಷ್ಟಕ 3.6 – ಸೂಚನದಾರರು ಸಮುದಾಯ ಶಿಬಿರಗಳಲ್ಲಿ ಭಾಗವಹಿಸಿ ಮದ್ಯವ್ಯಸನದಿಂದ ವಿಮುಕ್ತಿಗೊಂಡ ಕುರಿತಾಗಿ ತಿಳಿಸುತ್ತದೆ. 10(33.33%) ಸೂಚನದಾರರು ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆಯ ಪ್ರಾಯೋಜಕತ್ವದಲ್ಲಿ ಜನಜಾಗೃತಿ ವೇದಿಕೆಗಳು ನಡೆಸುವ ಮದ್ಯವರ್ಜನ ಶಿಬಿರಗಳಲ್ಲಿ ಭಾಗವಹಿಸಿ ವಿಮುಕ್ತಿ ಹೊಂದಿರುತ್ತಾರೆ. 20(66.67%) ಸೂಚನದಾರರು ಇತರ ವಿಧಾನಗಳ ಮೂಲಕ ಮದ್ಯವ್ಯಸನದಿಂದ ವಿಮುಕ್ತರಾಗಿರುತ್ತಾರೆ. ಕೋಷ್ಟಕದ ಮಾಹಿತಿಯ ಪ್ರಕಾರ ಶ್ರೀ ಕ್ಷೇತ್ರ ಧರ್ಮಸ್ಥಳದ ದೇವರ ಮೇಲಿನ ಭಯ, ನಂಬಿಕೆ ಮತ್ತು ಮನಪರಿವರ್ತನೆಯ ಮೂಲಕ ಮದ್ಯವ್ಯಸನದಿಂದ ವಿಮುಕ್ತರಾಗಿ ಇತರರಿಗೆ ಮಾದರಿಯಾಗಿದ್ದಾರೆ.

ಮೇಲಿನ ಮದ್ಯವ್ಯಸನ ವಿಮುಕ್ತಿ ಚಿಕಿತ್ಸಾ ವಿಧಾನಗಳನ್ನು ಪರಿಶೀಲಿಸಿದಾಗ ಸೂಚನದಾರರ ಅಭಿಪ್ರಾಯದಂತೆ ವೈದ್ಯಕೀಯ ಚಿಕಿತ್ಸೆ, ಸಮುದಾಯ ಶಿಬಿರ ಮತ್ತು ಅನಾಮಿಕ ಅಮಲಿಗಳು ನಡೆಸುವ ಸಭೆಗಳಲ್ಲಿ ಭಾಗವಹಿಸಿ ಮನಪರಿವರ್ತನೆ ಮತ್ತು ಸ್ವ ನಿರ್ಧಾರದಿಂದ ವಿಮುಕ್ತರಾಗಿರುವುದು ಪ್ರಶಂಸನೀಯ. ಹೆಚ್ಚಿನವರು ವೈದ್ಯಕೀಯ ಚಿಕಿತ್ಸೆಯ ಜೊತೆಗೆ ಕೌಟುಂಬಿಕ ಗುಂಪು ಚಿಕಿತ್ಸೆ, ಆಪ್ತ ಸಮಾಲೋಚನೆ, ದೇವರ ಮೇಲಿನ ನಂಬಿಕೆ, ಆತ್ಮ ವಿಶ್ವಾಸವು ಮದ್ಯಪಾನದಿಂದ ವಿಮುಕ್ತಿ ಹೊಂದಲು ಸಹಾಯ ಮಾಡುತ್ತದೆ ಎಂಬ ಅಭಿಪ್ರಾಯವನ್ನು ನೀಡಿದ್ದಾರೆ.

## ಮದ್ಯವ್ಯಸನದ ಚಿಕಿತ್ಸಾ ವಿಧಾನಗಳ ಪರಿಣಾಮ

ಈ ಅಧ್ಯಾಯವು ಸೂಚನದಾರರು ಮದ್ಯವ್ಯಸನ ಚಿಕಿತ್ಸಾ ವಿಧಾನಗಳ ಮೂಲಕ ವಿಮುಕ್ತಿ ಹೊಂದಿದ ನಂತರ ಅವರಲ್ಲಿ ಆದ ಪರಿಣಾಮ/ಬದಲಾವಣೆಗಳ ಬಗ್ಗೆ ಮಾಡಿದ ವಿಶ್ಲೇಷಣೆಯ ವರದಿಯನ್ನು ನೀಡುತ್ತದೆ. ಇಲ್ಲಿ ಪ್ರಮುಖವಾಗಿ ಅವರಲ್ಲಾದ ಆರೋಗ್ಯ ಸುಧಾರಣೆ, ಹಣಕಾಸಿನ ಪರಿಸ್ಥಿತಿ, ಉದ್ಯೋಗದಲ್ಲಿ ಮರುನೇಮಕಾತಿ ಮತ್ತು ಮುಂಭಡ್ತಿ, ಸಮಾಜದಲ್ಲಿ ಒಳ್ಳೆಯ ಸ್ಥಾನಮಾನ, ಸಂಘ-ಸಂಸ್ಥೆಗಳಲ್ಲಿ ಸದಸ್ಯತ್ವ, ವ್ಯಾಪಾರ/ಕೃಷಿ/ಕೂಲಿಯಲ್ಲಿ ಅಭಿವೃದ್ಧಿ, ಕೌಟುಂಬಿಕ ಸಾಮರಸ್ಯ, ಹಣ ಉಳಿತಾಯ ಮನೋಭಾವನೆ, ಸಭೆ-ಸಮಾರಂಭಗಳಲ್ಲಿ ಭಾಗವಹಿಸುವಿಕೆ, ನಡವಳಿಕೆಯಲ್ಲಿ ಸುಧಾರಣೆ, ಸಾಮಾಜಿಕ ಸೇವೆ, ಸಮಸ್ಯೆಗಳನ್ನು ಎದುರಿಸುವ ಸಾಮರ್ಥ್ಯ, ಆಪ್ತ ಸಮಾಲೋಚನೆ ಮತ್ತು ಅನಾಮಿಕ ಅಮಲಿಗಳು ನಡೆಸುವ ಸಭೆಯ ಮೂಲಕ ಮನಪರಿವರ್ತನೆ ಇತ್ಯಾದಿ ಪರಿಣಾಮಗಳ ಕುರಿತು ವಿವರ ನೀಡುತ್ತದೆ.

**<u>ಕೋಷ್ಟಕ 3.7 – ಸೂಚನದಾರರ ಆರೋಗ್ಯದಲ್ಲಿನ ಬದಲಾವಣೆಯ ಕುರಿತು ವಿವರ</u>**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 30 | 100.00 |
| 2. | ಇಲ್ಲ | – | – |
| | **ಒಟ್ಟು** | **30** | **100.00** |

ಕೋಷ್ಟಕ 3.7 – ಪ್ರಸ್ತುತ ಅಧ್ಯಯನದಲ್ಲಿ ಎಲ್ಲಾ ಸೂಚನದಾರರು 30(100%) ವಿವಿಧ ಚಿಕಿತಾ ವಿಧಾನಗಳ ಮೂಲಕ ಮದ್ಯವ್ಯಸನದಿಂದ ವಿಮುಕ್ತರಾಗಿದ್ದು ಎಲ್ಲರ ಆರೋಗ್ಯ ಸುಧರಣೆಯಾಗಿದೆ. ವಿಮುಕ್ತಗೊಂಡ ನಂತರ ಕೆಲಸದಲ್ಲಿ ಆಸಕ್ತಿ ಹೆಚ್ಚಾಗಿದೆ. ದೈಹಿಕ ಸಾಮರ್ಥ್ಯ ಅಭಿವೃದ್ಧಿಯಗಿದೆ. ಅಲ್ಲದೇ ಮಾನಸಿಕ ಆರೋಗ್ಯ ಕೂಡ ವೃದ್ಧಿಯಾಗಿದೆ ಎಂದು ಅಭಿಪ್ರಾಯಪಟ್ಟರು.

**<u>ಕೋಷ್ಟಕ 3.8 – ಸೂಚನದಾರರ ಮಾನಸಿಕ ಸ್ಥಿತಿಗತಿಯ ಕುರಿತು ವಿವರ</u>**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 10 | 33.33 |
| 2. | ಇಲ್ಲ | 20 | 66.67 |
| | **ಒಟ್ಟು** | **30** | **100.00** |

ಕೋಷ್ಟಕ 3.8 – ಸುಮಾರು 10(33.33%) ಸೂಚನದಾರರ ಅಭಿಪ್ರಾಯದಂತೆ ಅವರ ಮಾನಸಿಕ ಆರೋಗ್ಯ ಸುಧಾರಣೆಯಾಗಿದೆ. ಮದ್ಯವ್ಯಸನಿಗಳಾಗಿದ್ದಾಗ ಮಾನಸಿಕವಾಗಿ ಕುಗ್ಗಿ ಹೋಗಿದ್ದರು. ಕೆಲವರು ಖಿನ್ನತೆಯಿಂದ ಬಳಲುತ್ತಿದ್ದರು. ಮನೆಯವರ ಮೇಲೆ ಸಂಶಯ ಪ್ರವೃತ್ತಿ ಇತ್ತು. ಮದ್ಯವ್ಯಸನದಿಂದ ವಿಮುಕ್ತಿಗೊಂಡ ನಂತರ ಖಿನ್ನತೆ ಮತ್ತು ಸಂಶಯ ಪ್ರವೃತ್ತಿ ಸಮಸ್ಯೆ ಕಡಿಮೆಯಾಗಿದೆ. 20(66.67%) ಸೂಚನದಾರರಿಗೆ ಇದು ಅನ್ವಯವಾಗುವುದಿಲ್ಲ.

## ಕೋಷ್ಟಕ 3.9 – ಸೂಚನದಾರರ ಹಣಕಾಸಿನ ಸ್ಥಿತಿಗತಿಯ ಸುಧಾರಣೆಯ ಕುರಿತು ವಿವರ

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 30 | 100.00 |
| 2. | ಇಲ್ಲ | – | – |
| | **ಒಟ್ಟು** | **30** | **100.00** |

ಕೋಷ್ಟಕ 3.9 – ವಿಮುಕ್ತಿಗೊಂಡ ನಂತರ ಮಾಹಿತಿದಾರರ ಹಣಕಾಸು ಪರಿಸ್ಥಿತಿಯಲ್ಲಾದ ಸುಧಾರಣೆಯ ಬಗ್ಗೆ ಚರ್ಚಿಸಲಾಗಿದೆ. ಸುಮಾರು 30(100%) ಸೂಚನದಾರರು ಆರ್ಥಿಕವಾಗಿ ಅಭಿವೃದ್ಧಿಯಾಗಿದ್ದಾರೆ. ವ್ಯಸನಿಗಳಾಗಿದ್ದಾಗ ಸಾಲಗಾರರಾಗಿದ್ದರು. ಚಿಕಿತ್ಸೆಯ ಮೂಲಕ ವಿಮುಕ್ತಿಗೊಂಡ ನಂತರ ಸ್ವಂತ ಮನೆಯನ್ನು ಕಟ್ಟಿದ್ದಾರೆ, ಮಕ್ಕಳಿಗೆ ವಿದ್ಯಾಭ್ಯಾಸ ನೀಡುತ್ತಿದ್ದಾರೆ, ವಾಹನಗಳನ್ನು ಖರೀದಿಸಿದ್ದಾರೆ, ಬ್ಯಾಂಕ್, ಸ್ವ ಸಹಾಯ ಸಂಘಗಳಲ್ಲಿ ಹಣವನ್ನು ಉಳಿತಾಯ ಮಾಡುತ್ತಿದ್ದಾರೆ. ಅಲ್ಲದೇ ಮಕ್ಕಳ ಮದುವೆ, ಕೃಷಿ, ವ್ಯಾಪಾರದಲ್ಲಿ ಕೂಡ ಅಭಿವೃದ್ಧಿಯಾಗಿದ್ದಾರೆ. ಎಲ್ಲರೂ ಆರ್ಥಿಕವಾಗಿ ಸ್ವತಂತ್ರರಾಗಿದ್ದಾರೆ.

## ಕೋಷ್ಟಕ 3.10 – ಸೂಚನದಾರರ ಸರಕಾರಿ/ಖಾಸಗಿ/ಇತರೇ ಉದ್ಯೋಗದಲ್ಲಾದ ಬದಲಾವಣೆಯ ಬಗ್ಗೆ ವಿವರ

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 03 | 10.00 |
| 2. | ಇಲ್ಲ | – | – |
| 3. | ಅನ್ವಯವಾಗುವುದಿಲ್ಲ | 27 | 90.00 |
| | **ಒಟ್ಟು** | **30** | **100.00** |

ಕೋಷ್ಟಕ 3.10– ಮಾಹಿತಿದಾರರ ಉದ್ಯೋಗದಲ್ಲಿನ ಬದಲಾವಣೆಯ ಬಗ್ಗೆ ಇಲ್ಲಿ ವಿವರಿಸಲಾಗಿದೆ.ಪ್ರಸ್ತುತ ಅಧ್ಯಯನದಲ್ಲಿ ಕೇವಲ 03(10%) ಸೂಚನದಾರರು ಮಾತ್ರ ಸರ್ಕಾರಿ ಮತ್ತು ಇತರೇ ಉದ್ಯೋಗಗಳಿಂದ ಮದ್ಯವ್ಯಸನದಿಂದಾಗಿ ಅಮಾನತುಗೊಂಡಿದ್ದು, ಅವರಿಗೆ ಪುನಃ ಉದ್ಯೋಗ ದೊರಕಿದ್ದು, ಒಳ್ಳೆಯ ರೀತಿಯಲ್ಲಿ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. 27(90%) ಸೂಚನದಾರರು ಕೃಷಿ ಮತ್ತು ಕೂಲಿಯನ್ನು ಮಾಡುವ ಕಾರಣ ಅವರಿಗೆ ಅನ್ವಯವಾಗುವುದಿಲ್ಲ.

**ಕೋಷ್ಟಕ 3.11 – ಸೂಚನದಾರರ ಸರಕಾರಿ/ಖಾಸಗಿ/ಇತರೇ ಉದ್ಯೋಗದಲ್ಲಾದ ಮುಂಭಡ್ತಿಯ ವಿವರ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 10 | 33.33 |
| 2. | ಇಲ್ಲ | 20 | 66.67 |
| | **ಒಟ್ಟು** | **30** | **100.00** |

ಕೋಷ್ಟಕ 3.11 – ಮಾಹಿತಿದಾರರು ವಿಮುಕ್ತಿ ನಂತರ ಉದ್ಯೋಗದಲ್ಲಿ ಮುಂಭಡ್ತಿ ಪಡೆದ ನಂತರ ವಿವರಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ.ಸುಮಾರು 10(33.33%) ಮಾಹಿತಿದಾರರು ಮದ್ಯವ್ಯಸನದಿಂದ ವಿಮುಕ್ತಿಗೊಂಡ ನಂತರ ಸರ್ಕಾರಿ ಉದ್ಯೋಗದಲ್ಲಿ ಗುಮಾಸ್ತ ಹುದ್ದೆಯಿಂದ ಕಛೇರಿ ದ್ವಿತೀಯ ದರ್ಜೆ ಸಹಾಯಕರಾಗಿ ಮುಂಭಡ್ತಿ ಹೊಂದಿರುತ್ತಾರೆ. ಉಳಿದವರು ವ್ಯಾಪಾರ ಮತ್ತು ಇತರೇ ಕೆಲಸಗಳಾದ ಮರದ ಕೆಲಸ, ಪೈಂಟಿಂಗ್ ಕೆಲಸದಲ್ಲಿ ಹೆಚ್ಚುವರಿ ಕಾಂಟ್ರಕ್ಟ್ ತೆಗೆದುಕೊಂಡು ಸಬಂಧಪಟ್ಟ ಕೆಲಸದ ಮೇಲ್ವಿಚಾರಣೆ ಮಾಡುತ್ತಿದ್ದಾರೆ. ಉಳಿದ 20(66.67%) ಸೂಚನದಾರರು ಮುಂಭಡ್ತಿ ಹೊಂದಿರುವುದಿಲ್ಲ. ಆದರೆ ಅವರು ಕೃಷಿ ಮತ್ತು ಕೂಲಿ ಕೆಲಸವನ್ನು ಪ್ರತಿನಿತ್ಯ ಬಹಳ ಆಸಕ್ತಿಯಿಂದ ಮಾಡುತ್ತಿರುವ ವಿಚಾರವನ್ನು ಇಲ್ಲಿ ಗಮನಿಸಲಾಗಿದೆ.

**ಕೋಷ್ಟಕ 3.12 – ಸೂಚನದಾರರ ಸಮಾಜದಲ್ಲಿನ ಸ್ಥಾನಮಾನದಲ್ಲಾದ ಬದಲಾವಣೆ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 30 | 100.00 |
| 2. | ಇಲ್ಲ | – | – |
| | **ಒಟ್ಟು** | **30** | **100.00** |

ಕೋಷ್ಟಕ 3.12 –ಮದ್ಯವ್ಯಸನ ವಿಯುಕ್ತಿಯ ನಂತರ ಮಾಹಿತಿದಾರರ ಸಾಮಾಜಿಕ ಸ್ಥಾನಮಾನದಲ್ಲಾದ ಬದಲಾವಣೆ ಬಗ್ಗೆ ವಿವರ ನೀಡಲಾಗಿದೆ.ಬಹುಪಾಲು 30(100%) ಸೂಚನದಾರರ ಸಾಮಾಜಿಕ ಸ್ಥಾನಮಾನ ಹೆಚ್ಚಾಗಿದೆ. ಸಮಾಜದಲ್ಲಿ ಎಲ್ಲರೂ ಗುರುತಿಸುತ್ತಾರೆ, ಗೌರವಿಸುತ್ತಾರೆ. ಹೆಚ್ಚಿನವರು ಸಂಘ-ಸಂಸ್ಥೆಗಳಲ್ಲಿ ಒಳ್ಳೆಯ ಹುದ್ದೆಗಳನ್ನು ಪಡೆದುಕೊಂಡು ಸಮಾಜಮುಖೀ ಕೆಲಸಗಳನ್ನು ಮಾಡುತ್ತಾ ಸಮಾಜದಲ್ಲಿ ಎಲ್ಲರೊಂದಿಗೆ ಬೆರೆಯುತ್ತಾ ಆದರ್ಶ ಜೀವನವನ್ನು ನಡೆಸುತ್ತಿರುವ ವಿಚಾರವನ್ನು ಅವಲೋಕಿಸಲಾಗಿದೆ.

**ಕೋಷ್ಟಕ 3.13–ಸಂಘ-ಸಂಸ್ಥೆಗಳಲ್ಲಿ ಸದಸ್ಯತ್ವ ಹೊಂದಿದ ಕುರಿತು ಸೂಚನದಾರರ ಹಂಚಿಕೆ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 17 | 56.67 |
| 2. | ಇಲ್ಲ | 13 | 43.33 |
| | **ಒಟ್ಟು** | **30** | **100.00** |

ಕೋಷ್ಟಕ 3.13 – ವಿಮುಕ್ತಿಯ ನಂತರ ಸೂಚನದಾರರು ಸಂಘ-ಸಂಸ್ಥೆಗಳಲ್ಲಿ ಸದಸ್ಯತ್ವ ಪಡೆದುದರ ಬಗ್ಗೆ ವಿವರಣೆ ನೀಡಲಾಗಿದೆ. ಸುಮಾರು 17(56.67%) ಸೂಚನದಾರರು ಚಿಕಿತ್ಸೆಯ ಮೂಲಕ ಮದ್ಯವ್ಯಸನದಿಂದ ವಿಮುಕ್ತಿಗೊಂಡ ನಂತರ ಸಾಮಾಜಿಕ-ಧಾರ್ಮಿಕ-ಸಾಂಸ್ಕೃತಿಕ-ಆರ್ಥಿಕ-ರಾಜಕೀಯ ಸಂಘ ಸಂಸ್ಥೆಗಳಲ್ಲಿ ಸದಸ್ಯರಾಗಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಮದ್ಯಪಾನದ ದುಷ್ಪರಿಣಾಮಗಳ ಕುರಿತು ಜಾಗ್ರತಿ ನೀಡುತ್ತಿದ್ದಾರೆ. 13(43.33%) ಸೂಚನದಾರರು ಸಂಘ-ಸಂಸ್ಥೆಗಳಲ್ಲಿ ಸದಸ್ಯರಾಗಿರುವುದಿಲ್ಲ. ಆದರೆ ತಮ್ಮಿಂದಾದ ಸಹಾಯವನ್ನು ಸಮಾಜಕ್ಕೆ ಕೊಡುತ್ತಿರುವುದು ಗಮನಾರ್ಹವೆಂಬುದನ್ನು ಅವಲೋಕಿಸಲಾಗಿದೆ.

**ಕೋಷ್ಟಕ 3.14 – ಸೂಚನದಾರರು ವ್ಯಾಪಾರ/ಕೃಷಿ/ಕೂಲಿ ಕೆಲಸದಲ್ಲಿ ಅಭಿವೃದ್ಧಿ ಹೊಂದಿದ ಬಗ್ಗೆ ವಿವರ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 28 | 93.33 |
| 2. | ಇಲ್ಲ | 02 | 6.67 |
| | **ಒಟ್ಟು** | **30** | **100.00** |

ಕೋಷ್ಟಕ 3.14 – ಮಾಹಿತಿದಾರರ ವ್ಯಾಪಾರ/ಕೃಷಿ/ಕೂಲಿ ಕೆಲಸದಲ್ಲಾದ ಅಭಿವೃದ್ಧಿಯ ಬಗ್ಗೆ ಮಾಹಿತಿ ನೀಡಲಾಗಿದೆ. ಸುಮಾರು 28(93.33%) ಸೂಚನದಾರರು ಹೇಳುವಂತೆ ಚಿಕಿತ್ಸೆಯ ಮೂಲಕ ವಿಮುಕ್ತಗೊಂಡ ನಂತರ ಆರೋಗ್ಯ ಸುಧಾರಣೆಯಾಗಿದೆ. ಈ ಮೂಲಕ ಬಹಳ ಆಸಕ್ತಿಯಿಂದ ದಿನನಿತ್ಯ ಕೂಲಿ, ಕೃಷಿ ಮತ್ತು ವ್ಯಾಪಾರವನ್ನು ಬಹಳ ಶ್ರದ್ಧೆಯಿಂದ ಮಾಡುತ್ತಿದ್ದಾರೆ. 02(6.67%) ಸೂಚನದಾರರಿಗೆ ಆರೋಗ್ಯ ಸಮಸ್ಯೆಯ ಕಾರಣ ತಮ್ಮ ಕೆಲಸವನ್ನು ಗಮನಕೊಟ್ಟು ಮಾಡಲು ಸಾಧ್ಯವಾಗುತ್ತಿಲ್ಲ ಎಂಬ ಅಂಶವು ಈ ಅಧ್ಯಯನದಿಂದ ದೃಢಪಟ್ಟಿದೆ.

**ಕೋಷ್ಟಕ 3.15 – ಸೂಚನದಾರರ ಕೌಟುಂಬಿಕ ಕಲಹಗಳಲ್ಲಿ ಆದ ಸುಧಾರಣೆ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 30 | 100.00 |
| 2. | ಇಲ್ಲ | - | - |
| | **ಒಟ್ಟು** | **30** | **100.00** |

ಕೋಷ್ಟಕ 3.15 – ವಿಮುಕ್ತಿಯ ನಂತರ ಮಾಹಿತಿದಾರರ ಕೌಟುಂಬಿಕ ಕಲಹಗಳು ಕಡಿಮೆಯಾದ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ಈ ಅಧ್ಯಯನದ ಪ್ರಕಾರ 30(100%) ಸೂಚನದಾರರ ಕೌಟುಂಬಿಕ ಸಂಬಂಧ ಸುಧಾರಣೆಯಾಗಿದೆ. ವ್ಯಸನಿಗಳಾಗಿದ್ದಾಗ ಪ್ರತಿನಿತ್ಯ ಜಗಳ, ದೈಹಿಕ ಮತ್ತು ಮಾನಸಿಕ ಹಿಂಸೆಗಳು, ಮಕ್ಕಳ ಹಾಗೂ ಮಡದಿಯ ಮೇಲೆ ನಡೆಯುತ್ತಿದ್ದವು. ಅವರು ಹೇಳುವಂತೆ ಇದಕ್ಕೆಲ್ಲ ಕಾರಣ ಕುಡಿತ. ಪ್ರಸ್ತುತ ಕೌಟುಂಬಿಕ ಕಲಹಗಳಿಗೆ ಅವಕಾಶವೇ ಇಲ್ಲ. ಸಮಸ್ಯೆಗಳು ಬಂದಾಗ ಪರಸ್ಪರ ಕುಳಿತುಕೊಂಡು ಮಾತಿನ ಮೂಲಕ ಪರಿಹರಿಸಿಕೊಳ್ಳಲು ಶಕ್ತರಾಗಿರುತ್ತಾರೆ. ಇದಕ್ಕೆಲ್ಲ ಕಾರಣ ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳಾಗಿವೆ ಎಂಬುದನ್ನು ಗಮನಿಸಲಾಗಿದೆ.

**ಕೋಷ್ಟಕ 3.16 – ಸೂಚನದಾರರ ಸಂಗಾತಿಯೊಂದಿಗಿನ ಸಂಬಂಧ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 22 | 73.33 |
| 2. | ಇಲ್ಲ | – | – |
| 3. | ಅನ್ವಯವಾಗುವುದಿಲ್ಲ | 08 | 26.67 |
| | **ಒಟ್ಟು** | **30** | **100.00** |

ಕೋಷ್ಟಕ 3.16 – ಸೂಚನದಾರರ ಸಂಗಾತಿಯೊಂದಿಗಿನ ಸಂಬಂಧದ ಬಗ್ಗೆ ವಿವರ ನೀಡಲಾಗಿದೆ. ಸುಮಾರು 22(73.33%) ಸೂಚನದಾರರು ಹೇಳುವಂತೆ ಸಂಗಾತಿಯೊಂದಿಗಿನ ಅವರ ಸಂಬಂಧ ಉತ್ತಮವಾಗಿದೆ. ಪರಸ್ಪರ ಇಬ್ಬರಲ್ಲಿ ಪ್ರೀತಿ, ಸಹಕಾರ ಮತ್ತು ತ್ಯಾಗ ಮನೋಭಾವನೆಗಳು ಹೆಚ್ಚಾಗಿವೆ. ಕುಡಿತದಿಂದ ಸಂಸಾರವು ಸರ್ವನಾಶವಾಗುತ್ತದೆ. ಇದರಿಂದ ವಿಮುಕ್ತಿ ಹೊಂದಲು ಚಿಕಿತ್ಸೆ ಬೇಕೇ ಬೇಕು. 08(26.67%) ಸೂಚನದಾರರು ಮದುವೆಯಾಗದ ಕಾರಣ ಇದು ಅವರಿಗೆ ಅನ್ವಯವಾಗುವುದಿಲ್ಲ.



**ಕೋಷ್ಟಕ 3.17 – ಸೂಚನದಾರರ ಮಕ್ಕಳೊಂದಿಗಿನ ಸಂಬಂಧಗಳ ಬೆಳವಣಿಗೆ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 22 | 73.33 |
| 2. | ಇಲ್ಲ | – | – |
| 3. | ಅನ್ವಯವಾಗುವುದಿಲ್ಲ | 08 | 26.67 |
| | **ಒಟ್ಟು** | **30** | **100.00** |

ಕೋಷ್ಟಕ 3.17 – ವಿಮುಕ್ತಿಯ ನಂತರ ಮಾಹಿತಿದಾರರ ಮತ್ತು ಮಕ್ಕಳ ಸಂಬಂಧದ ಕುರಿತು ಚರ್ಚಿಸಲಾಗಿದೆ. ಸುಮಾರು 22(73.33%) ಸೂಚನದಾರರು ಚಿಕಿತ್ಸೆಯ ಮೂಲಕ ವಿಮುಕ್ತಿಗೊಂಡ ನಂತರ ಅವರನ್ನು ಅವರ ಮಕ್ಕಳು ಪ್ರೀತಿಸುತ್ತಿದ್ದಾರೆ. ಹೆಚ್ಚಿನವರು ಮಕ್ಕಳಿಗೆ ಉತ್ತಮ ಶಿಕ್ಷಣವನ್ನು ನೀಡುತ್ತಿದ್ದಾರೆ. ಮಕ್ಕಳ ಬಗ್ಗೆ ವಿಶೇಷ ಕಾಳಜಿ ವಹಿಸಿ ಅವರ ಸರ್ವತೋಮುಖ ಅಭಿವೃದ್ಧಿಗೆ ಒತ್ತು ನೀಡುತ್ತಿದ್ದಾರೆ. 08(26.66%) ಸೂಚನದಾರರು ಮದುವೆಯಾಗದ ಕಾರಣ ಇದು ಅವರಿಗೆ ಅನ್ವಯವಾಗುವುದಿಲ್ಲ.

## ರೇಖಾಚಿತ್ರ 3.18(C)

## ಸೂಚನದಾರರ ಶೇಕಡವಾರು ಹಣಕಾಸಿನ ಉಳಿತಾಯದ ವಿವರ




ರೇಖಾಚಿತ್ರ 3.18(C)- ಮದ್ಯವ್ಯಸನದಿಂದ ವಿಮುಕ್ತಿಗೊಂಡ ನಂತರ ಹೆಚ್ಚಿನವರು ಭವಿಷ್ಯಕ್ಕಾಗಿ ಹಣವನ್ನು ಉಳಿತಾಯ ಮಾಡುತ್ತಿದ್ದಾರೆ. ಸುಮಾರು 15(50%) ಸೂಚನದಾರರು ಸ್ವ-ಸಹಾಯ ಸಂಘಗಳಲ್ಲಿ, 10(33.33%) ಸೂಚನದಾರರು ಬ್ಯಾಂಕುಗಳಲ್ಲಿ ಹಣವನ್ನು ಉಳಿತಾಯ ಮಾಡಿಕೊಂಡು ಅಭಿವೃದ್ಧಿ ಕಾರ್ಯಗಳಿಗೆ ಬಳಸುತ್ತಿದ್ದಾರೆ. 05(16.67%) ಸೂಚನದಾರರು ಉಳಿತಾಯ ಮಾಡುತ್ತಿಲ್ಲ. ಆದರೆ ಮನೆಯ ವ್ಯವಹಾರವನ್ನು ಚೆನ್ನಾಗಿ ನಿಭಾಯಿಸಿಕೊಂಡು ಉತ್ತಮ ರೀತಿಯಲ್ಲಿ ಜೀವನ ನಡೆಸುತ್ತಿರುವ ವಿಚಾರ ಕಂಡುಕೊಳ್ಳಲಾಗಿದೆ.

## ಕೋಷ್ಟಕ 3.19 - ಸೂಚನದಾರರು ಸಭೆ-ಸಮಾರಂಭಗಳಲ್ಲಿ ಭಾಗವಹಿಸುವಿಕೆಯ ಪ್ರಮಾಣ

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 26 | 86.67 |
| 2. | ಇಲ್ಲ | 04 | 13.33 |
| | ಒಟ್ಟು | 30 | 100.00 |

ಕೋಷ್ಟಕ 3.19 –ಸೂಚನದಾರರು ಮದ್ಯವ್ಯಸನ ವಿಮುಕ್ತಿಯ ನಂತರ ಸಭೆ-ಸಮಾರಂಭಗಳಲ್ಲಿ ಭಾಗವಹಿಸಿದ ಕುರಿತು ವಿವರ ನೀಡುತ್ತದೆ.ಚಿಕಿತ್ಸೆಯ ಮೂಲಕ

ಮದ್ಯವ್ಯಸನದಿಂದ ವಿಮುಕ್ತಿಗೊಂಡ ನಂತರ ಧಾರ್ಮಿಕ-ಸಾಮಾಜಿಕ ಸಭೆ ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದಾರೆ. ಹೆಚ್ಚಿನವರು ಸಂಘ-ಸಂಸ್ಥೆಗಳಲ್ಲಿ ವಿವಿಧ ರೀತಿಯ ಪದಾಧಿಕಾರಿಗಳಾಗಿ ನೇಮಕಗೊಂಡು ಸ್ವತಃ ಹಲವಾರು ಕಾರ್ಯಕ್ರಮಗಳನ್ನು ಸಂಘಟಿಸುತ್ತಾ ಯಶಸ್ವಿಯಾಗಿದ್ದಾರೆ. ಈ ಮೂಲಕ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನವನ್ನು ಗಳಸಿಕೊಂಡಿದ್ದಾರೆ. ಕೇವಲ 04(13.33%) ಸೂಚನದಾರರು ಸಭೆ ಸಮಾರಂಭಗಳಲ್ಲಿ ಭಾಗವಹಿಸುತ್ತಿಲ್ಲ ಎಂಬುದನ್ನು ಅವಲೋಕಿಸಲಾಗಿದೆ.

**ಕೋಷ್ಟಕ 3.20 – ಸೂಚನದಾರರ ನಡವಳಿಕೆ/ವರ್ತನೆಯಲ್ಲಾದ ಬದಲಾವಣೆ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 30 | 100.00 |
| 2. | ಇಲ್ಲ | - | - |
| | **ಒಟ್ಟು** | **30** | **100.00** |

ಕೋಷ್ಟಕ 3.20 – ವಿಮುಕ್ತಿಗೊಂಡ ನಂತರ ಸೂಚನದಾರರ ನಡವಳಿಕೆಯಲ್ಲಿ ಆದ ಸುಧಾರಣೆಯ ಬಗ್ಗೆ ಅಭಿಪ್ರಾಯ ನೀಡಲಾಗಿದೆ. 30(100%) ಸೂಚನದಾರರ ನಡವಳಿಕೆ/ವರ್ತನೆಯಲ್ಲಿ ಬಹಳಷ್ಟು ಸುಧಾರಣೆಯಾಗಿದೆ. ಅವರೇ ಹೇಳುವಂತೆ ಕೋಪ, ಬೇಸರ, ನಿರಾಸಕ್ತಿ, ಸಾಮಾಜಿಕ ಆತಂಕಗಳು ಕಡಿಮೆಯಾಗಿವೆ. ಧನಾತ್ಮಕ ಚಿಂತನ ಹೆಚ್ಚಾಗಿದೆ. ಎಲ್ಲರೊಡನೆ ಮಾತನಾಡಬೇಕೆಂದು ಅನಿಸುತ್ತದೆ. ಮಕ್ಕಳು ಮತ್ತು ಕುಟುಂಬದ ಸದಸ್ಯರ ನಡುವೆ ಉತ್ತಮ ನಡವಳಿಕೆಯ ಮೂಲಕ ಕಲಹಗಳು ಕಡಿಮೆಯಾಗಿರುವ ವಿಷಯವನ್ನು ಗಮನಿಸಲಾಗಿದೆ.

**ಕೋಷ್ಟಕ 3.21 – ಚಿಕಿತ್ಸೆಯ ಮೂಲಕ ವಿಮುಕ್ತಿಗೊಂಡ ಸೂಚನದಾರರು ವ್ಯಸನಕ್ಕೆ ಒಳಗಾದವರನ್ನು ವಿಮುಕ್ತಿಗೊಳಸಲು ಚಿಕಿತ್ಸೆಗಾಗಿ ಸೇರಿಸಿದ ಕುರಿತು ನೀಡಿದ ವಿವರ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 22 | 73.33 |
| 2. | ಇಲ್ಲ | 08 | 26.67 |
| | **ಒಟ್ಟು** | **30** | **100.00** |

ಕೋಷ್ಟಕ 3.21 – ಮಾಹಿತಿದಾರರು ವಿಮುಕ್ತಿಗೊಂಡ ನಂತರ ಇತರರನ್ನು ವಿಮುಕ್ತಿಗಾಗಿ ಚಿಕಿತ್ಸೆ ಸೇರಿಸಿದ ಕುರಿತಾಗಿ ಇಲ್ಲಿ ಚರ್ಚಿಸಲಾಗಿದೆ. ಸುಮಾರು 22(73.33%) ಸೂಚನದಾರರು ಮದ್ಯವ್ಯಸನದಿಂದ ವಿಮುಕ್ತಿಗೊಂಡ ನಂತರ ವ್ಯಸನಕ್ಕೆ ಒಳಗಾದವರನ್ನು ವಿಮುಕ್ತಿ ಚಿಕಿತ್ಸೆಗಾಗಿ ಆಸ್ಪತ್ರೆಗೆ, ಸಮುದಾಯ ಶಿಬಿರಗಳಿಗೆ ಸೇರಿಸಿರುತ್ತಾರೆ. 08(26.67%) ಸೂಚನೆದಾರರು ಸೇರಿಸಿಲ್ಲ. ಆದರೆ ವಿಮುಕ್ತಿ ಹೊಂದುವಂತೆ ಪ್ರೇರಣೆ ನೀಡಿರುವುದು ಗಮನಾರ್ಹವಾಗಿದೆ.

**ಕೋಷ್ಟಕ 3.22–ಸೂಚನದಾರರು ಸಮಸ್ಯೆಗಳನ್ನು ಎದುರಿಸುವಿಕೆ ಕುರಿತಾಗಿ ನೀಡಿರುವ ಅಭಿಪ್ರಾಯ**

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 30 | 100.00 |
| 2. | ಇಲ್ಲ | – | – |
| | **ಒಟ್ಟು** | **30** | **100.00** |

ಕೋಷ್ಟಕ 3.22 – ಮಾಹಿತಿದಾರರು ವಿಮುಕ್ತಿಗೊಂಡ ನಂತರ ಸಮಸ್ಯೆಗಳನ್ನು ಎದುರಿಸುವಿಕೆ ಕುರಿತಾಗಿ ಅವರ ಅಭಿಪ್ರಾಯಗಳನ್ನು ಇಲ್ಲಿ ನೀಡಲಾಗಿದೆ. 30(100%) ಸೂಚನದಾರರು ಜೀವನದಲ್ಲಿ ಬರುವಂತಹ ಎಲ್ಲಾ ಸಮಸ್ಯೆಗಳನ್ನು ಸವಾಲಾಗಿ ಸ್ವೀಕರಿಸಲು ಧೈರ್ಯ ಬಂದಿದೆ ಎಂದು ಸಂತೋಷಪಡುತ್ತಾರೆ. ಚಿಕಿತ್ಸೆಯ ಮೂಲಕ ನ್ನಮಲ್ಲಿ ಆತ್ಮ ವಿಶ್ವಾಸ, ಛಲ, ನಂಬಿಕೆಗಳು ಹೆಚ್ಚಾಗಿವೆ. ಎಲ್ಲಾ ಸಮಸ್ಯೆಯನ್ನು ಬಗೆಹರಿಸುವ ಕೌಶಲ್ಯವನ್ನು ನಾವು ವೃದ್ಧಿಸಿಕೊಂಡಿದ್ದೇವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

## ರೇಖಾಚಿತ್ರ 3.23(C)– ಶೇಕಡವಾರು ಸೂಚನದಾರರು ಮದ್ಯಪಾನ ತ್ಯಜಿಸುವಲ್ಲಿ ಆಪ್ತ ಸಮಾಲೋಚನೆಯು ಸೂಚನದಾರರ ಮೇಲೆ ಬೀರಿದ ಪ್ರಭಾವ




ರೇಖಾಚಿತ್ರ 3.23(C)– ಮದ್ಯಪಾನ ತ್ಯಜಿಸುವಲ್ಲಿ ಆಪ್ತ ಸಮಾಲೋಚನೆಯ ಪ್ರಭಾವದ ಬಗ್ಗೆ ಮಾಹಿತಿದಾರರ ಅಭಿಪ್ರಾಯ ಇಲ್ಲಿ ನೀಡಲಾಗಿದೆ. 21(70%) ಸೂಚನದಾರರ ಅಭಿಪ್ರಾಯದಂತೆ ಮದ್ಯಪಾನ ತ್ಯಜಿಸುವಲ್ಲಿ ಔಷಧಿಯೊಂದಿಗೆ ಆಪ್ತ ಸಮಾಲೋಚನೆ ಕೂಡ ಅಗತ್ಯವಾಗಿದೆ. ಆಪ್ತ ಸಮಾಲೋಚನೆಯ ಮೂಲಕ ನಮ್ಮಲ್ಲಿ ಧೈರ್ಯ, ದೃಢ ನಿರ್ಧಾರ ಹೆಚ್ಚಾಗುತ್ತದೆ. ಅಲ್ಲದೇ ಮನಪರಿವರ್ತನೆ ಕೂಡ ಆಗುತ್ತದೆ. 09(30%) ಸೂಚನದಾರರು ಆಪ್ತಸಮಾಲೋಚನೆಯಿಂದ ಮದ್ಯಪಾನವನ್ನು ತ್ಯಜಿಸುವಲ್ಲಿ ಸಾಧ್ಯವಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ.

## ಕೋಷ್ಟಕ 3.24 – ಅನಾಮಿಕ ಅಮಲಿಗಳು ನಡೆಸುವ ಸಭೆಯ ಮೂಲಕ ಮದ್ಯವ್ಯಸನದಿಂದ ವಿಮುಕ್ತಿಗೊಳ್ಳುವುದರ ಕುರಿತು ಸೂಚನದಾರರ ಅಭಿಪ್ರಾಯ

| ಕ್ರಮ ಸಂಖ್ಯೆ | ಪ್ರತಿಕ್ರಿಯೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| 1. | ಹೌದು | 17 | 56.67 |
| 2. | ಇಲ್ಲ | 13 | 43.33 |
| | ಒಟ್ಟು | 30 | 100.00 |

ಕೋಷ್ಟಕ 3.24 – ಅನಾಮಿಕ ಅಮಲಿಗಳು ನಡೆಸುವ ಸಭೆಯ ಮೂಲಕ ಮದ್ಯವ್ಯಸನದಿಂದ ವಿಮುಕ್ತಿಗೊಳ್ಳುವುದರ ಕುರಿತಾಗಿ ಸೂಚನದಾರರ ಅಭಿಪ್ರಾಯ ಈ ಕೆಳಗಿನಂತಿದೆ.ಸುಮಾರು 17(56.67%) ಸೂಚನದಾರರು ವೈದ್ಯಕೀಯ ಚಿಕಿತ್ಸೆಯ ಜೊತೆಗೆ

ಅನಾಮಿಕ ಅಮಲಿಗಳು ನಡೆಸುವ ಸಭೆಗಳಲ್ಲಿ ಭಾಗವಹಿಸುವುದರ ಮೂಲಕ ನಮ್ಮ ಮನಪರಿವರ್ತನೆ ಆಗುತ್ತದೆ. ಸಭೆಗಳಲ್ಲಿ ವ್ಯಸನ ಮುಕ್ತರಾದವರು ಅವರ ಸಾಧನೆ ಮತ್ತು ವ್ಯಸನ ಜೀವನದ ಬಗ್ಗೆ ಹಂಚಿಕೊಂಡಾಗ ಅದು ಇತರರ ಮೇಲೆ ಪ್ರಭಾವ ಬರುತ್ತದೆ. ಇದರಿಂದ ವಿಮುಕ್ತಿ ಹೊಂದಲು ಸಾಧ್ಯ. 13(43.33%) ಸೂಚನದಾರರು ಅನಾಮಿಕ ಅಮಲಿಗಳು ನಡೆಸುವ ಸಭೆಯಲ್ಲಿ ಪಾಲ್ಗೊಳ್ಳುವುದರ ಮೂಲಕ ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ಸಾಧ್ಯವಿಲ್ಲ ಎಂದು ಅಭಿಪ್ರಾಯ ಪಡುತ್ತಾರೆ. ಪ್ರಸ್ತುತ ಅಧ್ಯಯನದಲ್ಲಿ 10 ಸೂಚನದಾರರು ಅನಾಮಿಕ ಅಮಲಿಗಳು ನಡೆಸುವ ಸಭೆಗಳಲ್ಲಿ ಪಾಲ್ಗೊಂಡು ಮನಪರಿವರ್ತನೆ ಮೂಲಕ ವಿಮುಕ್ತಿ ಹೊಂದಿರುವುದು ಒಂದು ಧನಾತ್ಮಕ ವಿಚಾರವಾಗಿದೆ.

ಮೇಲಿನ ವಿಶ್ಲೇಷಣೆಯನ್ನು ಗಮನಿಸಿದಾಗ ಮದ್ಯವ್ಯಸನ ವಿಮುಕ್ತಿಯ ಬೇರೆ ಬೇರೆ ಚಿಕಿತ್ಸಾ ವಿಧಾನಗಳು ಸೂಚನದಾರರ ಮೇಲೆ ಗಾಢವಾದ ಪರಿಣಾಮ ಬೀರಿರುವ ವಿಚಾರ ಕಂಡುಬಂದಿದೆ. ಮುಖ್ಯವಾಗಿ ಅವರ ಅಭಿಪ್ರಾಯದಂತೆ ಅವರು ದೈಹಿಕವಾಗಿ ಮತ್ತು ಮಾನಸಿಕವಾಗಿ ಆರೋಗ್ಯವಂತರಾಗಿದ್ದಾರೆ. ಹೆಚ್ಚಿನವರು ಕೃಷಿ/ಕೂಲಿ/ವ್ಯಾಪಾರ ಇತ್ಯಾದಿ ಕೆಲಸವನ್ನು ಆಸಕ್ತಿಯಿಂದ ಗಮನಕೊಟ್ಟು ಮಾಡುತ್ತಾ ಆರ್ಥಿಕವಾಗಿ ಚೇತರಿಸಿಕೊಂಡಿದ್ದಾರೆ. ಬಹುಪಾಲು ಸೂಚನದಾರರು ಮಕ್ಕಳಿಗೆ ವಿದ್ಯಾಭ್ಯಾಸ, ಹೊಸಮನೆಯ ನಿರ್ಮಾಣ ಹಾಗೂ ವಾಹನವನ್ನು ಖರೀದಿಸಿರುತ್ತಾರೆ. ಸೂಚನದಾರರು ಸಾಮಾಜಿಕವಾಗಿ ವಿವಿಧ ಸಂಘ-ಸಂಸ್ಥೆಗಳಲ್ಲಿ ಸದಸ್ಯರಾಗಿ ಸಾಮಾಜಿಕ ಸೇವೆಯಲ್ಲಿ ತೊಡಗಿಸಿಕೊಳ್ಳುವುದರ ಮೂಲಕ ಉತ್ತಮ ಸ್ಥಾನಮಾನ ಹೊಂದಿರುತ್ತಾರೆ. ಕೌಟುಂಬಿಕ ಕಲಹಗಳು ಕಮ್ಮಿಯಾಗಿ ಸುಖೀ ಸಂಸಾರ ನಡೆಸುತ್ತಿದ್ದಾರೆ. ಬ್ಯಾಂಕ್ ಮತ್ತು ಸ್ವ-ಸಹಾಯ ಸಂಘಗಳಲ್ಲಿ ಉಳಿತಾಯ ಮಾಡುತ್ತಿದ್ದಾರೆ. ನಡವಳಿಕೆಯಲ್ಲಿ ಬದಲಾವಣೆ ಮಾಡಿಕೊಂಡು ಜೀವನದಲ್ಲಿ ಎದುರಾಗುವ ಎಲ್ಲಾ ಸಮಸ್ಯೆಗಳಿಗೆ ತಾವೆ ಪರಿಹಾರ ಕಂಡುಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಸೂಚನದಾರರು ಮದ್ಯವ್ಯಸನದಿಂದ ವಿಮುಕ್ತಿಗೊಂಡ ನಂತರ ಈಗಾಗಲೇ ವ್ಯಸನಕ್ಕೆ ಬಲಿಯಾದವರನ್ನು ಭೇಟಿ ಮಾಡಿ ಮದ್ಯಪಾನ ಒಳ್ಳೆಯದಲ್ಲ, ಇದರಿಂದ ಸರ್ವನಾಶವಾಗುತ್ತದೆ ಎಂದು ಹೇಳಿ ಅವರನ್ನು ವ್ಯಸನ ಮುಕ್ತ ಚಿಕಿತ್ಸೆಗಾಗಿ ಆಸ್ಪತ್ರೆಗಳಿಗೆ ಸಮುದಾಯ ಶಿಬಿರಗಳಿಗೆ ಕಳುಹಿಸುವ ಪ್ರಯತ್ನವನ್ನು ಮಾಡಿರುವುದು ಗಮನಿಸಲಾಗಿದೆ. ಕೆಲವು ಸೂಚನದಾರರು ವೈದ್ಯಕೀಯ ಚಿಕಿತ್ಸೆಯನ್ನು ಪಡೆಯದೇ ಅನಾಮಿಕ ಅಮಲಿಗಳು ನಡೆಸುವ ಸಭೆಯಲ್ಲಿ ಭಾಗವಹಿಸಿ ಮನಪರಿವರ್ತನೆ ಮೂಲಕ ಸ್ವ-ನಿರ್ಧಾರದಿಂದ ವಿಮುಕ್ತರಾಗಿರುತ್ತಾರೆ. ಒಟ್ಟಾರೆಯಾಗಿ ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ಚಿಕಿತ್ಸೆಯ ಜೊತೆಗೆ ಸ್ವ-ನಿರ್ಧಾರ ಮತ್ತು ಆಪ್ತ ಸಮಾಲೋಚನೆ ಅಗತ್ಯ ಎಂಬುದನ್ನು ಮನಗಂಡಿರುವ ವಿಚಾರವು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಹಾಗೆಯೇ ಚಿಕಿತ್ಸೆಯ ಜೊತೆಗೆ ಸ್ವ ನಿರ್ಧಾರ ಮತ್ತು ಆಪ್ತ ಸಮಾಲೋಚನೆಯು ಅಗತ್ಯವಾಗಿರುವ ಅಂಶವನ್ನು ಈ ಅಧ್ಯಯನವು ದೃಢಪಡಿಸುತ್ತದೆ.

# ಅಧ್ಯಾಯ–೫

# ಅಧ್ಯಯನದ ಸಾರಾಂಶಗಳು, ಉಪಸಂಹಾರ ಮತ್ತು ಸಲಹೆಗಳು

## ಅಧ್ಯಾಯ – ೫

# ಅಧ್ಯಯನದ ಸಾರಂಶಗಳು, ಉಪಸಂಹಾರ ಮತ್ತು ಸಲಹೆಗಳು

ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ಶಿಬಿರಗಳು ಎಂಬ ವಿಷಯದ ಕುರಿತು ಉಡುಪಿ ತಾಲೂಕಿನಲ್ಲಿ ಸಂಶೋಧನೆ ನಡೆಸಲಾಗಿರುತ್ತದೆ. ಅಧ್ಯಯನಕ್ಕೆ ಒಟ್ಟು 30 ಸೂಚನದಾರರನ್ನು ಆಯ್ಕೆ ಮಾಡಿ ಪ್ರಶ್ನಾವಳಿಯ ಮೂಲಕ ಮನೆ ಭೇಟಿ ಮಾಡಿ ಮಾಹಿತಿ ಸಂಗ್ರಹಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಮುಖ್ಯವಾಗಿ ಮದ್ಯವ್ಯಸನದ ಸಮಸ್ಯೆಯನ್ನು ಪರಿಶೀಲಿಸುವುದು, ಮದ್ಯವ್ಯಸನ ವಿಮುಕ್ತಿ ಚಿಕಿತ್ಸಾ ವಿಧಾನಗಳ ಅಧ್ಯಯನ ಮತ್ತು ಅವುಗಳ ಪರಿಣಾಮಗಳು ಇವೇ ಮುಂತಾದ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನ ನಡೆಸಲಾಯಿತು. ಉದ್ದೇಶಗಳನ್ನು ಈಡೇರಿಸುವಲ್ಲಿ ನಡೆಸಿದ ಕಾರ್ಯಗಳ ಫಲಿತಾಂಶಗಳ ಸಾರಾಂಶ ಈ ಕೆಳಗಿನಂತಿದೆ.

ಪ್ರಸ್ತುತ ಅಧ್ಯಯನದಲ್ಲಿ ಬಹುಪಾಲು 56.67% ಸೂಚನದಾರರು ಮಧ್ಯ ವಯಸ್ಸಿನವರಾಗಿತ್ತಾರೆ. 90% ಸೂಚನದಾರರು ವೈವಾಹಿತರು, 40% ಮತ್ತು 26.67% ಸೂಚನದಾರರು ಕ್ರಮವಾಗಿ ಕೃಷಿ ಮತ್ತು ಕೂಲಿಯನ್ನು ಮಾಡುತ್ತ ಜೀವನ ಸಾಗಿಸುತ್ತಿದ್ದಾರೆ. ಸೂಚನದಾರರ ಕುಟುಂಬದ ವಾರ್ಷಿಕ ಆದಾಯವನ್ನು ಪರಿಶೀಲಿಸಿದಾಗ ಸರಾಸರಿ ಆದಾಯ ರೂ. 55,000/- ಆಗಿರುತ್ತದೆ. ಸುಮಾರು 43.33% ಮತ್ತು 30.00% ಸೂಚನದಾರರು ಕ್ರಮವಾಗಿ ಪ್ರಾಥಮಿಕ ಶಿಕ್ಷಣ ಹಾಗೂ 10ನೇ ತರಗತಿ ವಿಧ್ಯಾಭ್ಯಾಸವನ್ನು ಪೂರೈಸಿರುತ್ತಾರೆ. 20% ಸೂಚನದಾರರು ಅನಕ್ಷರಸ್ಥರಾಗಿದ್ದಾರೆ. ಸಮಪಾಲು ಸೂಚನದಾರರ ಕುಟುಂಬದ ಪ್ರಕಾರ ವಿಭಕ್ತ ಮತ್ತು ಅವಿಭಕ್ತ ಕುಟುಂಬವಾಗಿರುತ್ತದೆ. ಅಧ್ಯಯನವನ್ನು ಗಮನಿಸಿದಾಗ ಹೆಚ್ಚಿನವರು ಕೃಷಿ ಮತ್ತು ಕೂಲಿ ಕಾರ್ಮಿಕರಾಗಿದ್ದು, ಅವರ ಅಭಿಪ್ರಾಯದಂತೆ ಆರಂಭದಲ್ಲಿ ಮೋಜಿಗಾಗಿ

ಅರಂಭಿಸಿದ ಮದ್ಯಪಾನವು ನಿಯಂತ್ರಣ ತಪ್ಪಿ ಮದ್ಯ ವ್ಯಸನಕ್ಕೆ ಒಳಗಾಗಿರುವುದು ಗಮನಕ್ಕೆ ಬಂದಿದೆ.

ಮದ್ಯ ವ್ಯಸನದ ನಂತರ ಉಂಟಾಗುವ ಸಮಸ್ಯೆಗಳನ್ನು ವಿಶ್ಲೇಷಿಸಿದಾಗ 70% ಕ್ಕಿಂತಲು ಹೆಚ್ಚಿನವರು ದೈಹಿಕ ಮತ್ತು ಮಾನಸಿಕ ಸಮಸ್ಯೆಗಳಿಂದ ಬಳಲುತ್ತಿದ್ದರು. ಮುಖ್ಯವಾಗಿ ದೇಹದಲ್ಲಿ ನಿಶ್ಶಕ್ತಿ, ಹಸಿವು ಇಲ್ಲದಿರುವುದು, ಕೆಲಸದಲ್ಲಿ ನಿರಾಶಕ್ತಿ ಮತ್ತು ಮಾನಸಿಕ ಅಶಾಂತಿ ಇತ್ಯಾದಿಗಳು ಕಂಡು ಬರುತ್ತಿದ್ದವು. ಬಹುಪಾಲು 56.67% ಸೂಚನದಾರರು ಮದ್ಯಪಾನಕ್ಕಾಗಿ ಮನೆಯ ವಸ್ತುಗಳನ್ನು ಗಿರವಿ ಇಟ್ಟಿರುವುದು ಕಂಡು ಬಂದಿದೆ. 50% ಹೆಚ್ಚು ಸೂಚನದಾರರು ಮದ್ಯವ್ಯಸನಕ್ಕೆ ಒಳಗಾಗಿದ್ದಾಗ ಮಡದಿ ಮತ್ತು ಮಕ್ಕಳ ಜೊತೆ ಅವರ ಸಂಬಂಧವು ಹದೆಗೆಟ್ಟಿತು. ಮಡದಿ ಮತ್ತು ಮಕ್ಕಳು ಅವರನ್ನು ದ್ವೇಷಿಸುತ್ತಾ ಪ್ರತಿ ನಿತ್ಯ ಜಗಳವಾಡುತ್ತಿರುವ ಅಂಶವು ಅಧ್ಯಯನದಲ್ಲಿ ಗೋಚರಿಸಿದೆ. ಮಕ್ಕಳು ಶಿಕ್ಷಣದಿಂದ ವಂಚಿತರಾಗಿದ್ದರು. ಮದ್ಯಪಾನಕ್ಕಾಗಿ ಸೂಚನದಾರರು ಸಾಲವನ್ನು ಮಾಡಿದ ಅಂಶಗಳು ಬೆಳಕಿಗೆ ಬಂದಿದೆ. ಮದ್ಯವ್ಯಸನದಿಂದಾಗಿ ದೈನಂದಿನ ಜೀವನೋಪಾಯ ಕೆಲಸವನ್ನು ಸರಿಯಾಗಿ ನಿರ್ವಹಿಸಲು ಸಾದ್ಯವಾಗದೆ ಗೈರು ಹಾಜರಾಗುತ್ತಿದ್ದರು. ಸೂಚನದಾರರೇ ಹೇಳುವಂತೆ "ನಮಗೆ ಸಮಾಜದಲ್ಲಿ ಗೌರವ ಸ್ಥಾನಮಾನ ಸಿಗುತ್ತರಲಿಲ್ಲ,ಅಲ್ಲದೇ ಎಲ್ಲರೂ ಟೀಕಿಸುತ್ತ ಅವಹೇಳನ ಮಾಡುತ್ತಿದ್ದರು" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಎಲ್ಲಾ ಸಮಸ್ಯೆಗಳನ್ನು ಅವಲೋಕಿಸಿದಾಗ ಮದ್ಯಪಾನದಿಂದ ಒಬ್ಬ ವ್ಯಕ್ತಿ ಸರ್ವನಾಶನಾಗುವುದಲ್ಲದೆ ಅವರ ಕುಟುಂಬ ಮತ್ತು ಸಮಾಜದ ಅಭಿವೃದ್ಧಿಯು ಕುಂಠಿತಗೊಳ್ಳುತ್ತದೆ ಎಂಬ ಅಂಶವನ್ನು ಈ ಅಧ್ಯಯನದಿಂದ ಕಂಡುಕೊಳ್ಳಬಹುದು. ಈ ನಿಟ್ಟಿನಲ್ಲಿ ಮದ್ಯವ್ಯಸನದಿಂದ ಉಂಟಾಗುವ ಸಮಸ್ಯೆಗಳ ಬಗ್ಗೆ ಜನರಿಗೆ ಜಾಗೃತಿಯ ಕೊರತೆ ಇರುವುದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಮದ್ಯವ್ಯಸನ ಮುಕ್ತಿಯ ಚಿಕಿತ್ಸಾ ವಿಧಾನಗಳನ್ನು ಗಮನಿಸಿದಾಗ, ಸೂಚನದಾರರು ವೈದ್ಯಕೀಯ ಚಿಕಿತ್ಸೆ, ಸಮುದಾಯ ಶಿಬಿರಗಳ ಮೂಲಕ ಮತ್ತು ಅನಾಮಿಕ ಅಮಲಿಗಳು ನಡೆಸುವ ಸಭೆಗಳಲ್ಲಿ ಭಾಗವಹಿಸಿ ಮದ್ಯವ್ಯಸನದಿಂದ ವಿಮುಕ್ತಗೊಂಡಿರುತ್ತಾರೆ. ವೈದ್ಯಕೀಯ ಚಿಕಿತ್ಸೆಯಲ್ಲಿ 10 (33.33%) ಸೂಚನದಾರರು ಆಸ್ಪತ್ರೆಗೆ ದಾಖಲಾಗಿ ಔಷಧಿಯ ಜೊತೆಗೆ ಮನೋವೈದ್ಯರು ಮತ್ತು ಮನೋವೈದ್ಯಕೀಯ ಸಮಾಜಿಕ ಕಾರ್ಯಕರ್ತರು ನಡೆಸುವ 'ಆಪ್ತ ಸಮಾಲೋಚನೆ ಮತ್ತು ಕೌಟುಂಬಿಕ ಗುಂಪು ಚಿಕಿತ್ಸೆ'ಯಲ್ಲಿ ಪಾಲ್ಗೊಂಡು ಧೃಡ ನಿರ್ಧಾರದಿಂದ ಮದ್ಯವ್ಯಸನದಿಂದ ವಿಮುಕ್ತಗೊಂಡಿರುತ್ತಾರೆ. ಹಾಗೆಯೇ 10 (33.33%) ಸೂಚನದಾರರು ಶ್ರೀ. ಕ್ಷೇ. ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ ಪ್ರಾಯೋಜಿತ ಜನಜಾಗೃತಿ ವೇದಿಕೆಗಳು ನಡೆಸುವ 'ಸಮುದಾಯ ಶಿಬಿರ'ಗಳಲ್ಲಿ ಚಿಕಿತ್ಸೆಗಾಗಿ ದಾಖಲಾಗಿ ವಿಶೇಷವಾಗಿ ದೇವರ ಮೇಲಿನ ಭಯ-ಭಕ್ತಿ ಮತ್ತು ಮನಪರಿವರ್ತನೆಯ ವಿಧಾನಗಳ ಮೂಲಕ ಮದ್ಯವ್ಯಸನದಿಂದ ವಿಮುಕ್ತಗೊಂಡಿರುತ್ತಾರೆ. ಅಲ್ಲದೇ 10 (33.34%) ಸೂಚನದಾರರು ಅನಾಮಿಕ ಅಮಲಿಗಳು ನಡೆಸುವ ಸಭೆಗಳಲ್ಲಿ ಭಾಗವಹಿಸಿ ಈಗಾಗಲೆ ಕುಡಿತದಿಂದ ವಿಮುಕ್ತರಾದವರು ತಮ್ಮ ಮದ್ಯವ್ಯಸನದ ಕಷ್ಟದ ಜೀವನ ಮತ್ತು ಚಿಕಿತ್ಸೆಯ ಮೂಲಕ ವಿಮುಕ್ತಿ ಹೊಂದಿದ ನಂತರ ತಮ್ಮಲ್ಲಾದ ಬದಲವಣೆಯ ಅನುಭವಗಳನ್ನು ಹಂಚಿಕೊಳ್ಳವುದರ ಮೂಲಕ ಪ್ರೇರೇಪಿತಗೊಂಡು ಮದ್ಯವ್ಯಸನದಿಂದ ವಿಮುಕ್ತಿಗೊಂಡಿರುವ ಅಂಶವನ್ನು ಈ ಅದ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿಧಾನಗಳ ಪರಿಣಾಮಗಳ ಮಾಹಿತಿ ವಿಶ್ಲೇಷಣೆಯನ್ನು ನೋಡಿದಾಗ ಬಹುಪಾಲು ಸೂಚನದಾರರ ದೈಹಿಕ ಮತ್ತು ಮಾನಸಿಕ ಅರೋಗ್ಯ ಸುಧಾರಿಸಿರುವ ಮತ್ತು ಸಮಾಜದಲ್ಲಿ ಉತ್ತಮ ಸ್ಥಾನ ಮಾನ ಸಿಕ್ಕಿರುವ ವಿಚಾರವನ್ನು ಗಮನಿಸಲಾಗಿದೆ. ಹಣಕಾಸಿನ ಸ್ಥಿತಿಗತಿಯು ಸುಧಾರಣೆಯಾಗಿದ್ದು, ವಿಮುಕ್ತಿ ಹೊಂದಿದವರು

ದೈನಂದಿನ ಜೀವನೋಪಾಯ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸುತ್ತಿರುವುದನ್ನು ಕಂಡುಕೊಳ್ಳಲಾಗಿದೆ. ಕೌಟುಂಬಿಕ ಕಲಹಗಳು ಕಡಿಮೆಯಾಗಿದ್ದು, ಮಡದಿ ಮತ್ತು ಮಕ್ಕಳು ಇವರನ್ನು ಪ್ರೀತಿ ಮನೋಭಾವನೆಯಿಂದ ಕಾಣುತ್ತಿದ್ದಾರೆ. ಸಾಮಾಜಿಕ ಸಂಘ - ಸಂಸ್ಥೆಗಳಲ್ಲಿ ಸದಸ್ಯತ್ವವನ್ನು ಪಡೆದುಕೊಂಡು ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡುಅವರ ನಡವಳಿಕೆಯಲ್ಲಿ ಬದಲಾವಣೆಯಾಗಿ ಎಲ್ಲಾ ಸಮಸ್ಯೆಗಳನ್ನು ಎದುರಿಸುವ ಸಾಮಾರ್ಥ್ಯವನ್ನು ಬೆಳೆಸಿಕೊಂಡಿರುವುದು ಈ ಅಧ್ಯಯನದಲ್ಲಿ ದೃಢಪಟ್ಟಿದೆ. ಬ್ಯಾಂಕು ಮತ್ತು ಸ್ವ-ಸಹಾಯ ಸಂಘಗಳಲ್ಲಿ ಭವಿಷ್ಯಕ್ಕಾಗಿ ಹಣವನ್ನು ಉಳಿತಾಯ ಮಾಡುತ್ತಿದ್ದಾರೆ, ಹಾಗೆಯೇ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಕೊಟ್ಟು ಮಕ್ಕಳ ಮದುವೆಯನ್ನು ಮಾಡಿರುತ್ತಾರೆ. ಕೃಷಿ, ಕೂಲಿ ಹಾಗೂ ವ್ಯಾಪಾರಗಳಲ್ಲಿ ಅಭಿವೃದ್ಧಿಯನ್ನು ಕಂಡುಕೊಂಡು ಹೊಸ ಮನೆಯ ನಿರ್ಮಾಣ, ವಾಹನಗಳ ಖರೀದಿ ಹಾಗೂ ಸಾಲವನ್ನು ಮರುಪಾವತಿ ಮಾಡುವಲ್ಲಿ ಯಶಸ್ಸು ಕಂಡಿದ್ದಾರೆ. ಅಲ್ಲದೆ ಆಪ್ತ ಸಮಾಲೋಚನೆ ಮತ್ತು ಮನಃ ಪರಿವರ್ತನ ವಿಧಾನಗಳು ಹೆಚ್ಚಿನ ಸೂಚನದಾರರ ಮೇಲೆ ಪ್ರಭಾವ ಬೀರಿದ ಅಂಶವನ್ನು ಈ ಅಧ್ಯಯನದಲ್ಲಿ ಕಾಣಬಹುದು. ಒಟ್ಟಾರೆಯಾಗಿ ಚಿಕಿತ್ಸಾ ಪರಿಣಾಮಗಳು ಸೂಚನದಾರರ ಮೇಲೆ ಸಕಾರಾತ್ಮಕ ಪರಿಣಾಮ ಬೀರಿರುವುದನ್ನು ಅಧ್ಯಯನದ ದತ್ತಾಂಶಗಳಿಂದ ಕಂಡುಕೊಳ್ಳಬಹುದು.

ಅಧ್ಯಯನದ ಫಲಿತಗಳು ಸಾದರ ಪಡಿಸುವಂತೆ ಯಾವುದೇ ವ್ಯಕ್ತಿಗಳು ಉದ್ದೇಶಪೂರ್ವಕವಾಗಿ ಮದ್ಯಪಾನ ಮಾಡುವುದಿಲ್ಲ. ಮೋಜಿಗಾಗಿ, ಶೋಕಿಗಾಗಿ, ಸಹವಾಸ ದೋಷದಿಂದ, ಒತ್ತಾಯದ ಮೇರೆಗೆ, ಒತ್ತಡ, ಕ್ಷಣಿಕ ಸುಖಕ್ಕಾಗಿ ಹಾಗೂ ದೈಹಿಕ ಮತ್ತು ಮಾನಸಿಕ ಸಮಸ್ಯೆಗಳ ನಿವಾರಣೆಗಾಗಿ ಕುಡಿತವನ್ನು ಪ್ರಾರಂಭಿಸುತ್ತಾರೆ. ಕ್ರಮೇಣ ಕುಡಿತವು ಇವರ ನಿಯಂತ್ರಣ ತಪ್ಪಿ ಮದ್ಯವ್ಯಸನಕ್ಕೆ ಬಲಿಯಾಗುತ್ತಾರೆ. ಮದ್ಯವ್ಯಸನವು ಒಂದು ಪುನಾರವರ್ತಿತ ಕಾಯಿಲೆಯಾಗಿದ್ದು, ಇದಕ್ಕೆ ಚಿಕಿತ್ಸೆ ಬಹಳ ಅಗತ್ಯವಾಗಿದೆ. ಮದ್ಯವ್ಯಸದಿಂದಾಗುವ ದುಷ್ಪರಿಣಾಮಗಳ ಬಗ್ಗೆ ಜನರಲ್ಲಿ ಜಾಗೃತಿಯ ಕೊರತೆ ಇರುವುದು

ಪ್ರಸ್ತುತ ಅಧ್ಯಯನ ದೃಢಪಡಿಸುತ್ತದೆ. ಹಾಗೆಯೇಸೂಕ್ತ ಚಿಕಿತ್ಸೆಯ ಮೂಲಕ ಮದ್ಯವ್ಯಸನದಿಂದ ವಿಮುಕ್ತಹೊಂದಬಹುದೆಂಬ ವಿಷಯವೂ ಈ ಅಧ್ಯಯನದಿಂದ ತಿಳಿಯಬಹುದು. ಅದೇ ರೀತಿಯಾಗಿಗಾಂಧೀಜಿಯವರ ಆಶಯದಂತೆ ಮದ್ಯಪಾನ ವಿಮುಕ್ತ ಸಮಾಜ ನಿರ್ಮಾಣವಾಗಬೇಕಾದರೆ ಪ್ರತಿಯೊಬ್ಬರು ಸಂಕಲ್ಪ ತೆಗೆದುಕೊಳ್ಳಬೇಕು ಎಂಬುದು ಈ ವಿಚಾರಕ್ಕೆ ಪುಷ್ಠಿ ನೀಡುತ್ತದೆ. ಆ ಮೂಲಕ ಮದ್ಯವ್ಯಸನ ವಿಮುಕ್ತ ಸಮಾಜ ನಿರ್ಮಾಣ ಸಾಧ್ಯ ಎಂಬ ವಿಚಾರವು ಮೇಲಿನ ಸತ್ಯಾಂಶಗಳಿಂದ ದೃಢಪಡಿಸಬಹುದು.

ಮುಂದುವರೆಯುವುದು →

## ಮುಂದಿನ ಅಧ್ಯಯನಕ್ಕಾಗಿ ಸಲಹೆಗಳು

ಈ ಮೇಲಿನ ಅಧ್ಯಯನಗಳ ಫಲಿತಗಳ ಆಧಾರದಲ್ಲಿ ಮುಂದಿನ ಅಧ್ಯಯನಕ್ಕಾಗಿ ಈ ಕೆಳಗಿನ ಸಲಹೆಗಳನ್ನು ನೀಡಲಾಗಿದೆ.

1. ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ಉಡುಪಿ ತಾಲೂಕಿಗೆ ಮಾತ್ರ ಸೀಮಿತವಾಗಿದ್ದು ಇದನ್ನು ಜಿಲ್ಲಾ ಮಟ್ಟಕ್ಕೆ ವಿಸ್ತರಿಸಬಹುದು.
2. ಈ ಅಧ್ಯಯನದಲ್ಲಿ ನಮೂನೆಯ ಗಾತ್ರ ಚಿಕ್ಕದಾಗಿದ್ದು ಮುಂದೆ ದೊಡ್ಡ ಗಾತ್ರದ ನಮೂನೆಯನ್ನು ಬಳಸಿಕೊಂಡು ಮದ್ಯವ್ಯಸನ ವಿಮುಕ್ತಿಯ ಚಿಕಿತ್ಸಾ ವಿದಾನಗಳು ಮತ್ತು ಪರಿಣಾಮಗಳ ಬಗ್ಗೆ ವಿಶಾಲವಾಗಿ ಮತ್ತು ಆಳವಾಗಿ ರಾಜ್ಯ ಮಟ್ಟದಲ್ಲಿ ಅಧ್ಯಯನ ನಡೆಸಬಹುದು.
3. ಸರಕಾರ ಮತ್ತು ಸರಕಾರೇತರ ಸಂಘ-ಸಂಸ್ಥೆಗಳು ಈ ಸಮಸ್ಯೆಗಳ ಕುರಿತು ತಾವು ನಡೆಸಿದ ಕಾರ್ಯಕ್ರಮ ಯೋಜನೆಗಳ ಒಂದು ಮೌಲ್ಯ ಮಾಪನ ಸಂಶೋಧನೆ ನಡೆಸಲು ಅವಕಾಶಗಳವೆ.ಮತ್ತು
4. ಕರ್ನಾಟಕ ರಾಜ್ಯದಲ್ಲಿರುವ ಮದ್ಯವ್ಯಸನ ವಿಮುಕ್ತಿ ಚಿಕಿತ್ಸಾ ಕೇಂದ್ರಗಳ ಕುರಿತು ಅಧ್ಯಯನ ನಡೆಸಲು ಅವಕಾಶಗಳವೆ.

# ಪರಾಮರ್ಶನ ಗ್ರಂಥಗಳು

## ಪುಸ್ತಕಗಳು:


1. ಕೆ.ಪಿ.ಸ್ವಾಮಿ (2004), 'ಮದ್ಯಪಾನ – ಸಂತೋಷ ವ್ಯಸನ ಯಾವುದು ಸರಿ?' ನವಕರ್ನಾಟಕ, ಪಬ್ಲಿಕೇಷನ್, ಪ್ರೈವೇಟ್ ಲಿಮಿಟೆಡ್.

2. ಡಾ। ಎಲ್. ಮಂಜುನಾಥ್, ವಿವೇಕ್ ವಿ.ಪ್ಯಾಸ್ (2011), 'ಮದ್ಯವರ್ಜನ ಶಿಬಿರ ಸಂಹಿತೆ' ಬೆಳ್ತಂಗಡಿ : ಜಿಲ್ಲಾ ಜನಜಾಗೃತಿ ಪ್ರಕಾಶನ.

3. ಎಂ.ಚಂದ್ರ ಪೂಜಾರಿ (2008), 'ಸಂಶೋಧನ ಪ್ರಸ್ತಾವ,' ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

4. ಎಂ. ಚಂದ್ರ ಪೂಜಾರಿ (2005), 'ಸಮಾಜ ಸಂಶೋಧನೆ', ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

5. ಗೊರೂರು ರಾಮಸ್ವಾಮಯ್ಯಂಗಾರ್ (2011), 'ಮದ್ಯಪಾನದಿಂದ ವಿಮೋಚನೆ (ಗಾಂಧಿ ಗ್ರಂಥಮಾಲೆ–33)', ಬೆಂಗಳೂರು: ಗಾಂಧಿಯಾನ ಪಬ್ಲಿಷಿಂಗ್ ಹೌಸ್.

6. Biswanth Hosh (1988), Contemprorary Social Problems of India. Mumbai : Himalaya Publishing House.

7. K. Sekar, R. Parthasarathi, B. Muralidar, M. Chandrashekar Rao (2007), 'Hand Book of Psychiatric Social Work', Bangalore: Nimhans Publications.

8. Alcoholic Anonymous (1938), Alcoholic Anonymous World Service, INC New York City 2001.

9. Dr. Manoj Kumar Sharma, Dr. L.N. Suman (2010), Substance use – facts for the Common Man; Bangalore: Nimhans Publications.

**ದಿನಪತ್ರಿಕೆಗಳು:**

ಉದಯವಾಣಿ, ವಿಜಯ ಕರ್ನಾಟಕ, ಪ್ರಜಾವಾಣಿ, ಸಂಯುಕ್ತ ಕರ್ನಾಟಕ, Times of India, Deccan Herald.

**ಅಂತರ್ಜಾಲ ಮಾಹಿತಿ:**

www.google.com
www.yahoo.com
www.udupinews.com

## ಅನುಬಂಧ –ಗ

**ಕರ್ನಾಟಕದಲ್ಲಿ ಲಭ್ಯವಿರುವ ಪ್ರಮುಖ ಮದ್ಯವ್ಯಸನ ವಿಮುಕ್ತಿ ಚಿಕಿತ್ಸಾ ಆಸ್ಪತ್ರೆ/ಕೇಂದ್ರಗಳ ವಿವರ:**

- ನ್ಯಾಷನಲ್ ಇನ್ಸಿಟ್ಯೂಟ್ ಆಫ್ ಮೆಂಟಲ್ ಹೆಲ್ತ್ ಆ್ಯಂಡ್ ನ್ಯೂರೋ ಸಾಯನ್ಸಸ್, ಬೆಂಗಳೂರು
- ಕಡಬಮ್ಸ್ ಮದ್ಯವ್ಯಸನ ವಿಮುಕ್ತಿ ಕೇಂದ್ರ, ಬೆಂಗಳೂರು
- ಶಾಂತಿ ಮದ್ಯವ್ಯಸನ ವಿಮುಕ್ತಿ ಕೇಂದ್ರ, ಚಿಕ್ಕಮಗಳೂರು
- ಕೃಪಾ ರಿವೈಟಲ್ ಕೇಂದ್ರ, ಬೆಂಗಳೂರು
- ಕರ್ನಾಟಕ ಸ್ಟಾರ್ ಲೈಫ್ ಕೇಂದ್ರ, ಬೆಂಗಳೂರು
- ಫಾದರ್ ಮುಲ್ಲರ್ಸ್ ಕೇಂದ್ರ, ಮಂಗಳೂರು
- ತಪೋವನ ಮಲ್ಟಿ ಸ್ಪೆಶಾಲಿಟಿ ಆಸ್ಪತ್ರೆ, ದಾವಣಗೆರೆ
- ಫ್ರೀಡಮ್ ಫೌಂಡೇಶನ್, ಬೆಂಗಳೂರು
- ಪ್ರಜ್ಞಾ ಕೌನ್ಸಿಲಿಂಗ್ ಸೆಂಟರ್, ಮಂಗಳೂರು
- ತೇಜೋಮಯ ಕೌನ್ಸಿಲಿಂಗ್ ಸೆಂಟರ್, ಮೈಸೂರು
- ಗರುಡ ರಿಕವರಿ ಕೇಂದ್ರ, ಬೆಂಗಳೂರು
- ಕೃಷ್ಣರಾಜೇಂದ್ರ ಆಸ್ಪತ್ರೆ, ಮೈಸೂರು
- ಓಂ ಬೀಚ್ ರೆಸಾರ್ಟ್, ಕುಮಟಾ
- ಹೈಯರ್ ಪವರ್ ಫೌಂಡೇಶನ್, ಬೆಂಗಳೂರು
- ಟೈಡಾ ಮದ್ಯವ್ಯಸನ ವಿಮುಕ್ತಿ ಕೇಂದ್ರ, ಬೆಂಗಳೂರು
- ಮಿರಾಕಲ್ ಫೌಂಡೇಶನ್, ಬೆಂಗಳೂರು
- ಅಭಯಂ ಕೇಂದ್ರ, ಬೆಂಗಳೂರು

## ಅನುಬಂಧ –೨

### ಉಡುಪಿಯಲ್ಲಿ ಲಭ್ಯವಿರುವ ಮದ್ಯವ್ಯಸನ ವಿಮುಕ್ತಿ ಚಿಕಿತ್ಸಾ ಆಸ್ಪತ್ರೆ/ಕೇಂದ್ರಗಳ ವಿವರ:

- **ನವಜೀವನ ಆಪ್ತ ಸಲಹಾ ಕೇಂದ್ರ, ಡಾ। ಎ.ವಿ. ಬಾಳಿಗಾ ಸ್ಮಾರಕ ಆಸ್ಪತ್ರೆ, ದೊಡ್ಡಣ್ಣಗುಡ್ಡೆ, ಉಡುಪಿ**

ಇದು ಉಡುಪಿ ಜಿಲ್ಲೆಯಲ್ಲಿ ಮದ್ಯವ್ಯಸನ ವಿಮುಕ್ತಿ ಚಿಕಿತ್ಸಾ ಕೇಂದ್ರಗಳಲ್ಲಿ ಮುಂಚೂಣಿಯಲ್ಲಿದೆ. ಚಿಕಿತ್ಸೆಗಾಗಿ ದಾಖಲಾದ ವ್ಯಕ್ತಿಗಳಿಗೆ ಔಷಧಿಯ ಜೊತೆಗೆ ಆಪ್ತ ಸಮಾಲೋಚನೆ, ಕೌಟುಂಬಿಕ ಗುಂಪು ಚಿಕಿತ್ಸೆಯನ್ನು ಮನೋವೈದ್ಯರು ಮತ್ತು ವೈದ್ಯಕೀಯ ಸಾಮಾಜಿಕ ಕಾರ್ಯಕರ್ತರು, ದಾದಿಯರ ತಂಡವು ನೀಡುತ್ತದೆ. ವಿಶೇಷವಾಗಿ ಪ್ರತಿ ವರ್ಷ ಜನವರಿ 1 ರಿಂದ 10 ಮತ್ತು ಜೂನ್ 1 ರಿಂದ 10 ರವರೆಗೆ 10 ದಿನಗಳ ಉಚಿತ ಸಮುದಾಯ ಮದ್ಯವರ್ಜನ ಶಿಬಿರಗಳನ್ನು ನಡೆಸುತ್ತಿದ್ದಾರೆ. ಚಿಕಿತ್ಸೆಗೆ ಬಂದವರನ್ನು ಮನಃಪರಿವರ್ತನೆಗಾಗಿ ಅನಾಮಿಕ ಅಮಲಿಗಳು ನಡೆಸುವ ಸಭೆಗೆ ಕಳುಹಿಸಿಕೊಡುತ್ತಾರೆ. ಚಿಕಿತ್ಸೆಯ ಅನಂತರ ಅನುಸರಿಸುವಿಕೆಯನ್ನು ಕೂಡಮಾಡುತ್ತಿದ್ದಾರೆ. ಅಲ್ಲದೇ ಮದ್ಯವ್ಯಸನದಿಂದ ವಿಮುಕ್ತಿಗೊಂಡು 'ನವಜೀವನ' ನಡೆಸುತ್ತಿರುವವರನ್ನು ಸನ್ಮಾನಿಸುವ ಮೂಲಕ ಅವರನ್ನು ಗುರುತಿಸಿ ಸಮಾಜಕ್ಕೆ ಮಾದರಿ ಎಂದು ತೋರಿಸಿಕೊಡುತ್ತಾರೆ.

- **ಗೊರಟ್ಟಿ ಆಸ್ಪತ್ರೆ, ಸಂತೆಕಟ್ಟೆ, ಉಡುಪಿ**

ಇಲ್ಲಿ ಮೊದಲಿಗೆ ಚಿಕಿತ್ಸೆಗೆ ಬಂದವರನ್ನು ಆಸ್ಪತ್ರೆಯಲ್ಲಿ ಮದ್ಯವ್ಯಸನ ವಿಮುಕ್ತಿ ಚಿಕಿತ್ಸೆಗಾಗಿ ದಾಖಲುಪಡಿಸುತ್ತಾರೆ. ಅನಂತರ ವೈದ್ಯರ ತಂಡವು ಔಷಧಿಯನ್ನು ನೀಡುತ್ತದೆ. ಇದರ ಜೊತೆಗೆ ಆಪ್ತ ಸಮಾಲೋಚನೆ, ಕೌಟುಂಬಿಕ ಗುಂಪು ಚಿಕಿತ್ಸಾ ವಿಧಾನಗಳ ಮೂಲಕ ವಿಮುಕ್ತಿ ಹೊಂದಲು ಪ್ರೇರೇಪಿಸುತ್ತಾರೆ. ಚಿಕಿತ್ಸೆಯ ನಂತರ ವಿಮುಕ್ತಿಗೊಂಡ ಬಳಿಕ ಹೆಚ್ಚಿನ ಸಹಾಯ/ಮಾರ್ಗದರ್ಶನಕ್ಕಾಗಿ ಅನುಸರಿಸುವಿಕೆ ವಿಧಾನವನ್ನು ಕೂಡಮಾಡುತ್ತಾರೆ.

## ಅನುಬಂಧ –೩

**ಸಮುದಾಯ ಮದ್ಯವ್ಯಸನ ವಿಮುಕ್ತಿ ಶಿಬಿರಗಳನ್ನು ನಡೆಸುವ ಇಲಾಖೆ/ಆಸ್ಪತ್ರೆ/ಸಂಘ ಸಂಸ್ಥೆಗಳ ವಿವರ:**

- **ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಪ್ರಾಯೋಜಿತ ಜನಜಾಗೃತಿ ಮದ್ಯವರ್ಜನ ವೇದಿಕೆ, ಉಡುಪಿ ಜಿಲ್ಲೆ**

ಇದು ಸಮುದಾಯ ಮದ್ಯವರ್ಜನ ಶಿಬಿರವಾಗಿದ್ದು, ಊರ ಸಂಘ-ಸಂಸ್ಥೆಗಳ ಸಹಭಾಗಿತ್ವದೊಂದಿಗೆ ಶಿಬಿರವನ್ನು ಸಂಘಟಿಸುತ್ತಾರೆ. ಇಲ್ಲಿ ಹೆಚ್ಚಿನವರು ಔಷಧಿ ಜೊತೆಗೆ ದೇವರ ಮೇಲಿನ ಭಯ-ಭಕ್ತಿ ಹಾಗೂ ಮನಪರಿವರ್ತನೆಯ ಮೂಲಕ ಮದ್ಯವ್ಯಸನದಿಂದ ವಿಮುಕ್ತರಾಗುತ್ತಾರೆ.

- **ಸಮಗ್ರ ಗಿರಿಜನ ಅಭಿವೃದ್ಧಿ ಇಲಾಖೆ, ಉಡುಪಿ**

ಈ ಇಲಾಖೆಯು ವಿಶೇಷವಾಗಿ ಕೊರಗ ಸಮುದಾಯದಲ್ಲಿ ಮದ್ಯವ್ಯಸನಕ್ಕೆ ಬಲಿಯಾದವರನ್ನು ಗುರುತಿಸಿ ವಿಮುಕ್ತಿಗಾಗಿ ಉಚಿತ 10 ದಿನಗಳ ಮದ್ಯವರ್ಜನ ಶಿಬಿರಗಳನ್ನು ನಡೆಸುತ್ತಿದೆ.

## ಅನುಬಂಧ –೩

**ಉಡುಪಿ ಜಿಲ್ಲೆಯಲ್ಲಿ ಅನಾಮಿಕ ಅಮಲಿಗಳು ನಡೆಸುವ ಸಭೆಯ ಗುಂಪುಗಳ ವಿವರ:**

- ಪ್ರೇರಣ ಅನಾಮಿಕ ಅಮಲಿಗಳ ಗುಂಪು, ಕ್ರಿಶ್ಚಿಯನ್ ಹೈಸ್ಕೂಲ್, ಉಡುಪಿ
- ಡಾ। ಎ.ವಿ. ಬಾಳಿಗಾ ಸ್ಮಾರಕ ಆಸ್ಪತ್ರೆ ಅನಾಮಿಕ ಅಮಲಿಗಳ ಗುಂಪು, ದೊಡ್ಡಣಗುಡ್ಡೆ, ಉಡುಪಿ
- ಎಂ.ಐ.ಟಿ ಅನಾಮಿಕ ಅಮಲಿಗಳ ಗುಂಪು, ಮಣಿಪಾಲ
- ಜಿಲ್ಲಾ ಸರಕಾರಿ ಆಸ್ಪತ್ರೆ ಅನಾಮಿಕ ಅಮಲಿಗಳ ಗುಂಪು, ಅಜ್ಜರಕಾಡು, ಉಡುಪಿ
- ಮಹಾತ್ಮ ಗಾಂಧೀಜಿ ಪ್ರಾಥಮಿಕ ಶಾಲೆ ಅನಾಮಿಕ ಅಮಲಿಗಳ ಗುಂಪು, ಉಡುಪಿ
- ಗೊರಟ್ಟಿ ಆಸ್ಪತ್ರೆ ಅನಾಮಿಕ ಅಮಲಿಗಳ ಗುಂಪು, ಸಂತೆಕಟ್ಟೆ, ಉಡುಪಿ
- ಕ್ರೈಸ್ಟ್ ಕಿಂಗ್ ಅನಾಮಿಕ ಅಮಲಿಗಳ ಗುಂಪು, ಕಾರ್ಕಳ
- ಶಂಕರನಾರಾಯಣ ಅನಾಮಿಕ ಅಮಲಿಗಳ ಗುಂಪು, ಕುಂದಾಪುರ
- ಅನಾಮಿಕ ಅಮಲಿಗಳ ಗುಂಪು, ಸೈಂಟ್ ಮೇರಿಸ್ ಶಾಲೆ, ಚರ್ಚ್ ರೋಡ್, ಕುಂದಾಪುರ ಚರ್ಚ್ ಶಾಲೆ ವಠಾರ
- ಅನಾಮಿಕ ಅಮಲಿಗಳ ಗುಂಪು, ಸರಕಾರಿ ಆಸ್ಪತ್ರೆ, ಸಮುದಾಯ ಆರೋಗ್ಯ ಕೇಂದ್ರ, ಬ್ರಹ್ಮಾವರ

## ಅನುಬಂಧ –೫

## ಪ್ರಶ್ನಾವಳಿ

# "ಮದ್ಯವ್ಯಸನ ವಿಮುಕ್ತಿ ಚಿಕಿತ್ಸಾ ವಿಧಾನಗಳು –ಉಡುಪಿ ತಾಲೂಕಿನ ಒಂದು ಅಧ್ಯೆ ಯನ"

## ಎಂ.ಫಿಲ್ (ಅಭಿವೃದ್ಧಿ ಅಧ್ಯಯನ)ಅಧ್ಯಯನಕ್ಕಾಗಿ ರಚಿಸಲ್ಪಟ್ಟ ಪ್ರಶ್ನಾವಳಿ

1. **ಸೂಚನಾದಾರರ ಮೂಲ ಮಾಹಿತಿ**

1. ಹೆಸರು ಮತ್ತು ವಿಳಾಸ =

2. ವಯಸ್ಸು=

(ಅ).20-35 (ಆ) 35-50 (ಇ)50-65 (ಈ) 65 ಯಿಂದ ಮೇಲ್ಪಟ್ಟ

3.ವೈವಾಹಿಕ ಸ್ಥಿತಿಗತಿ

(ಅ)ಮದುವೆಯಾಗಿದೆ (ಆ)ಮದುವೆಯಾಗಿಲ್ಲ

4. ವಿಚ್ಛೇದಿತರಾಗಿದ್ದರೇ ಮದ್ಯಪಾನವೇ ಪ್ರಮುಖ ಕಾರಣವಾಗಿತ್ತೇ?

ಅ) ಹೌದು ಆ) ಇಲ್ಲ

5. ಉದ್ಯೋಗ

ಅ) ಕೃಷಿ (ಆ) ಕೂಲಿ (ಇ) ವ್ಯಾಪಾರ (ಈ) ಸರ್ಕಾರಿ ಅಥವಾ ಖಾಸಗಿ ಸಂಸ್ಥೆಯ ಉದ್ಯೋಗ (ಉ)ಇತರೆ

6. ಕುಟುಂಬದ ವಾರ್ಷಿಕ ಆದಾಯ

(ಅ)10,000-50,000 ರೂ ವರೆಗೆ

(ಆ)50,000-1,00,000 ರೂ ವರೆಗೆ

(ಇ)1,00,000-1,50,000 ರೂವರೆಗೆ

(ಈ)1,50,000 ಮೇಲ್ಪಟ್ಟು

7. ವಿದ್ಯಾರ್ಹತೆ

(ಅ)ಅನಕ್ಷರಸ್ಥ (ಆ) ಪ್ರಾಥಮಿಕ ಶಿಕ್ಷಣ

(ಇ) 10ನೇ ತರಗತಿ (ಈ) ಪಿ.ಯು.ಸಿ (ಉ) ಪದವಿ (ಊ) ಇತರೆ

8. ಕುಟುಂಬದ ವಿಧ

(ಅ) ವಿಭಕ್ತ ಕುಟುಂಬ (ಆ)ಅವಿಭಕ್ತ ಕುಟುಂಬ

## 2. ಮದ್ಯವ್ಯಸನದ ಸಮಸ್ಯೆಗಳು

9. ಮದ್ಯವ್ಯಸನದ ನಂತರ ನಿಮಗೆ ಈ ಕೆಳಗಿನ ಯಾವ ಸಮಸ್ಯೆಗಳು ಉಂಟಾಗಿದೆ/ಆಗುತ್ತಿದೆ?
ಅ) ಅನಾರೋಗ್ಯ ಆ) ಸಂಶಯ ಪ್ರವೃತ್ತಿ/ಖಿನ್ನತೆ
ಇ)ಹಸಿವು ಇಲ್ಲದೆ ಇರುವುದು ಈ) ಇತರೆ

10. ಮದ್ಯಪಾನದ ಅಭ್ಯಾಸದಿಂದ ನಿಮ್ಮ ತೂಕ ಕಮ್ಮಿಯಾಗಿದೆಯೇ?

ಅ) ಹೌದು ಆ) ಇಲ್ಲಾ

11. ಮದ್ಯದ ಅಮಲಿನಿಂದಾಗಿ ಅಪಘಾತವಾಗಿ ಆಸ್ಪತ್ರೆ ಸೇರುವಂತಾಗಿದೆಯೇ?

ಅ) ಹೌದು ಆ) ಇಲ್ಲಾ

12. ಮದ್ಯವನ್ನು ಖರೀದಿಸುವ ಸಲುವಾಗಿ ಮನೆಯ ವಸ್ತುಗಳನ್ನು ಗಿರವಿ ಇಡುವ ಸಂದರ್ಭ ಒದಗಿ ಬಂದಿದೆಯೇ?
ಅ) ಹೌದು ಆ) ಇಲ್ಲಾ

13. ನೀವು ಮದ್ಯಪಾನ ಮಾಡುವುದರಿಂದ ನಿಮ್ಮ ಮಡದಿಯೊಂದಿಗಿನ ಸಂಬಂಧವನ್ನು ತಿಳಿಸಿರಿ.
ಅ) ಚೆನ್ನಾಗಿದೆ ಆ) ಆಗಾಗ್ಗೆ ಜಗಳವಾಗುತ್ತದೆ ಇ) ಅಸಹಕಾರ ಪ್ರವೃತ್ತಿ
ಈ) ಮನೆ ಬಿಟ್ಟು ಹೋಗುತ್ತೇನೆಂದು ಹೇಳುತ್ತಾರೆ
ಉ) ವಿಚ್ಛೇದನ ನೀಡುತ್ತೇನೆಂದು ಹೇಳುತ್ತಿರುತ್ತಾರೆ.

14. ನಿಮ್ಮ ಮಕ್ಕಳು ನಿಮ್ಮ ಪ್ರಭಾವದಿಂದ ಮದ್ಯಪಾನ ಅಭ್ಯಾಸ ಮಾಡಿದ್ದಾರೆಯೇ?
ಅ) ಹೌದು ಆ) ಇಲ್ಲಾ

15. ನಿಮಗೆ ಮದ್ಯಪಾನದ ಅಭ್ಯಾಸವಿದ್ದು ಮಕ್ಕಳ ಜೊತೆಗಿನ ನಿಮ್ಮ ಸಂಬಂಧ ಹೇಗಿದೆ ಎಂದು ತಿಳಿಸಿ.
ಅ) ಚೆನ್ನಾಗಿದೆ ಆ) ಜಗಳವಾಡುತ್ತಾರೆ ತಾತ್ಸಾರ ಭಾವನೆ

ಈ) ಮದ್ಯಪಾನ ವಿರೋಧಿಸುತ್ತಾರೆ.

16. ಮದ್ಯವ್ಯಸನದಿಂದಾಗಿ ನಿಮ್ಮ ಸಾಮಾಜಿಕ ಸ್ಥಾನಮಾನ ಕಮ್ಮಿಯಾಗಿದೆ ಎಂದು ಭಾವಿಸಿದ್ದೀರಾ?

ಅ) ಹೌದು ಆ) ಇಲ್ಲಾ

17. ಮದ್ಯವ್ಯಸನದಿಂದಾಗಿ ನೀವು ಎಂದಾದರೂ ಕೆಲಸಕ್ಕೆ ಗೈರು ಹಾಜರಾಗಿದ್ದೀರಾ?

ಅ) ಹೌದು ಆ) ಇಲ್ಲಾ

18. ಮದ್ಯವ್ಯಸನದಿಂದಾಗಿ ನೀವು ನಿಮ್ಮ ಕೆಲಸದಿಂದ ಅಮಾನತುಗೊಂಡಿದ್ದೀರಾ?

ಅ) ಹೌದು ಆ) ಇಲ್ಲಾ

19. ಮದ್ಯಪನದಿಂದ ನಿಮ್ಮ ಕೆಲಸ ಕಾರ್ಯಗಳಲ್ಲಿ ಮೊದಲಿಗಿಂತ ಆಸಕ್ತಿ ಕಡಿಮೆಯಾಗಿದೆಯೇ?

ಅ) ಹೌದು ಆ) ಇಲ್ಲಾ

20. ಮದ್ಯಪಾನದಿಂದಾಗಿ ನಿಮ್ಮ ವ್ಯಾಪಾರದಲ್ಲಿ ಈ ಹಿಂದೆ ನಷ್ಟ ಅನುಭವಿಸಿದ್ದೀರಾ?

ಅ) ಹೌದು ಆ) ಇಲ್ಲಾ

21. ಮದ್ಯವ್ಯಸನದಿಂದಾಗಿ ನಿಮ್ಮ ಸಾಲದ ಹೊರೆ ಹೆಚ್ಚಾಗಿದೆ ಎಂದು ಹೇಳುತ್ತೀರಾ?

ಅ) ಹೌದು ಆ) ಇಲ್ಲಾ

22. ಮದ್ಯಪಾನ ಮಾಡಿ ನಿಮ್ಮಿಂದ ತಪ್ಪು/ಅಪರಾಧಗಳಾಗಿ ಪ್ರಕರಣ ದಾಖಲಾಗುವ ಸಂದರ್ಭಗಳು ಒದಗಿ ಬಂದಿದೆಯೇ?
ಅ) ಹೌದು ಆ) ಇಲ್ಲಾ

**3. ಮದ್ಯವ್ಯಸನದ ಚಿಕಿತ್ಸಾ ವಿಧಾನಗಳು:**

23. ನೀವು ಈ ಕೆಳಗಿನ ಯಾವ ಚಿಕಿತ್ಸಾ ವಿಧಾನವನ್ನು ಆಯ್ದುಕೊಂಡು ಮದ್ಯವ್ಯಸನದಿಂದ ವಿಮುಕ್ತಿ ಹೊಂದಿರುತ್ತೀರಿ? ಯಾವುದೆಂದು ತಿಳಿಸಿರಿ.

ಅ) ವೈದ್ಯಕೀಯ ಚಿಕಿತ್ಸೆ ಆ) ಸಮುದಾಯ ಶಿಬಿರಗಳ ಮೂಲಕ
ಇ) ಅನಾಮಿಕ ಅಮಲಿಗಳು ನಡೆಸುವ ಸಭೆಗಳ ಮೂಲಕ
ಈ) ದೇವರ ಮೇಲಿನ ಪ್ರಮಾಣದಿಂದ ಉ) ಇತರ ಚಿಕಿತ್ಸಾ ವಿಧಾನಗಳು

24. ನೀವು ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ಔಷಧಿಯನ್ನು ಪಡೆದುಕೊಂಡಿದ್ದೀರಾ?

ಅ) ಹೌದು ಆ) ಇಲ್ಲಾ

ಹೌದಾದರೆ ಎಷ್ಟು ವರ್ಷಗಳಿಂದ ಚಿಕಿತ್ಸೆ ಪಡೆದಿದ್ದೀರಿ/ಪಡೆಯುತ್ತಿದ್ದೀರಿ?

ಅ) ಅಲೋಪತಿ ಆ) ಆಯುರ್ವೇದ ಇ) ಹೋಮಿಯೋಪತಿ

25. ನೀವು ಕೌಟುಂಬಿಕ ಗುಂಪು ಚಿಕಿತ್ಸೆಯಲ್ಲಿ ಪಾಲ್ಗೊಂಡಿದ್ದೀರಾ?

ಅ) ಹೌದು ಆ) ಇಲ್ಲಾ

26. ಮದ್ಯವ್ಯಸನದಿಂದ ವಿಮುಕ್ತಿ ಹೊಂದಲು ನಡೆಸಲಾಗುವ ಆಪ್ತ ಸಮಾಲೋಚನೆಯಲ್ಲಿ ಭಾಗವಹಿಸಿದ್ದೀರಾ?

ಅ) ಹೌದು ಆ) ಇಲ್ಲಾ

ಹೌದಾದರೇ ವಿಮುಕ್ತಿ ಹೊಂದಲು ಇದು ನಿಮಗೆ ಹೇಗೆ ಸಹಾಯಕಾರಿಯಾಗಿದೆ?

27. ವೈದ್ಯಕೀಯ ಚಿಕಿತ್ಸೆಯ ಮೂಲಕ ಮದ್ಯವ್ಯಸನದಿಂದ ವಿಮುಕ್ತಿ ಹೊಂದಬಹುದೆಂಬ ವಿಶ್ವಾಸ ನಿಮಗಿದೆಯೇ?

ಅ) ಹೌದು ಆ) ಇಲ್ಲಾ

ಇಲ್ಲವಾದರೆ ಕಾರಣ ನೀಡಿ.

28. ನೀವು ಆಪ್ತ ಸಮಾಲೋಚನೆಯಲ್ಲದೇ ಇತರ ಯಾವ ಸಮುದಾಯ ಶಿಬಿರಗಳಲ್ಲಿ ಭಾಗವಹಿಸಿದ್ದೀರಿ?

ಅ) ಆ) ಇ) ಈ)

ಉ) ಊ)

ನಿಮಗೆ ವಿಮುಕ್ತಿ ಹೊದಲು ಇದರಿಂದ ಯಾವ ಅನುಕೂಲತೆಗಳಾಗಿವೆ.

## 5. ಮದ್ಯವ್ಯಸನದ ಚಿಕಿತ್ಸಾ ವಿಧಾನಗಳ ಪರಿಣಾಮ

29. ಮದ್ಯವ್ಯಸನದಿಂದ ವಿಮುಕ್ತಿಗೊಂಡ ನಂತರ ನಿಮ್ಮ ಆರೋಗ್ಯ ಸುಧಾರಿಸಿದೆಯೇ?

ಅ) ಹೌದು ಆ) ಇಲ್ಲಾ

30. ಆತ್ಮಹತ್ಯೆ ಯೋಚನೆಗಳು ಕಮ್ಮಿಯಾಗಿದೆಯೇ ಅಥವಾ ಇಲ್ಲವಾಗಿದೆಯೇ?

ಅ) ಹೌದು ಆ) ಇಲ್ಲಾ

31. ನಿಮ್ಮ ಹಣಕಾಸಿನ ಪರಿಸ್ಥಿತಿ ಸುಧಾರಣೆಯಾಗಿದೆಯೇ?

ಅ) ಹೌದು ಆ) ಇಲ್ಲಾ

32. ಮದ್ಯಪಾನದಿಂದಾಗಿ ನೀವು ಉದ್ಯೋಗವನ್ನು ಕಳೆದುಕೊಂಡಿದ್ದಲ್ಲಿ ವ್ಯಸನದಿಂದ ವಿಮುಕ್ತಿಗೊಂಡ ನಂತರ ನಿಮಗೆ ಉದ್ಯೋಗ ಪುನಃ ದೊರಕಿದೆಯೇ?

ಅ) ಹೌದು ಆ) ಇಲ್ಲಾ

33. ನಿಮ್ಮ ಉದ್ಯೋಗದಲ್ಲಿ ಮುಂಭಡ್ತಿ ದೊರಕಿದೆಯಾ?

ಅ) ಹೌದು ಆ) ಇಲ್ಲಾ

34. ಸಮಾಜದಲ್ಲಿ ನಿಮ್ಮ ಸ್ಥಾನಮಾನ ಹೆಚ್ಚಾಗಿದೆಯಾ?

ಅ) ಹೌದು ಆ) ಇಲ್ಲಾ

35. ವಿಮುಕ್ತಗೊಂಡ ನಂತರ ನೀವು ಯಾವುದಾದರೂ ಸಂಘ ಸಂಸ್ಥೆಯಲ್ಲಿ ಸದಸ್ಯರಾಗಿರುವಿರಾ?

ಅ) ಹೌದು ಆ) ಇಲ್ಲಾ

36. ಈಗ ನೀವು ನಿಮ್ಮ ವ್ಯಾಪಾರ/ಕೃಷಿ/ಕೂಲಿಯನ್ನು ಆಸಕ್ತಿ ಕೊಟ್ಟು ಅಭಿವೃದ್ಧಿಯನ್ನು ಗಮನಿಸಲು ಸಾಧ್ಯವಾಗುತ್ತಿದೆಯೇ?

ಅ) ಹೌದು ಆ) ಇಲ್ಲಾ

ಹೌದಾದರೇ ವಿವರಣೆ ನೀಡಿ

37. ಕೌಟುಂಬಿಕ ಕಲಹಗಳು ಕಡಿಮೆಯಾಗಿದೆಯೇ?

ಅ) ಹೌದು ಆ) ಇಲ್ಲಾ

38. ನಿಮ್ಮ ಸಂಗಾತಿ ನಿಮ್ಮನ್ನು ಸ್ವೀಕರಿಸಿದ್ದಾರೆಯೇ?

ಅ) ಹೌದು ಆ) ಇಲ್ಲಾ

39. ನಿಮ್ಮ ಮಕ್ಕಳು ನಿಮ್ಮನ್ನು ಪ್ರೀತಿಸುತ್ತಿದ್ದಾರೆಯೇ?

ಅ) ಹೌದು ಆ) ಇಲ್ಲಾ

40. ನೀವು ಈಗ ಉಳಿತಾಯವನ್ನು ಮಾಡುತ್ತಿರುವಿರಾ?

ಅ) ಹೌದು ಆ) ಇಲ್ಲಾ

41. ನೀವು ಈಗ ಧಾರ್ಮಿಕ ಸಭೆ ಸಮಾರಂಭಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದೀರಾ?

ಅ) ಹೌದು ಆ) ಇಲ್ಲಾ

42. ವಿಮುಕ್ತಿಯ ಬಳಿಕ ನಿಮ್ಮ ನಡವಳಿಕೆ/ವರ್ತನೆಯಲ್ಲಿ ಸುಧಾರಿಕೆ ಆಗಿದೆ ಎಂದು ನಂಬುತ್ತೀರಾ?

ಅ) ಹೌದು ಆ) ಇಲ್ಲಾ

43. ನೀವು ಯಾರಾದರೂ ಮದ್ಯವ್ಯಸನಕ್ಕೆ ಒಳಗಾದವರನ್ನು ಚಿಕಿತ್ಸೆಗೆ ಸೇರಿಸಿದ್ದೀರಾ?

ಅ) ಹೌದು ಆ) ಇಲ್ಲಾ

44. ಹಿಂದಿಗಿಂತ ನೀವು ನಿಮ್ಮ ಸಮಸ್ಯೆಗಳನ್ನು ಈಗ ಎದುರಿಸಲು ಸಮರ್ಥರಾಗಿದ್ದೀರಾ?

ಅ) ಹೌದು ಆ) ಇಲ್ಲಾ

45. ಮದ್ಯಪಾನವನ್ನು ತ್ಯಜಿಸುವಲ್ಲಿ ಆಪ್ತ ಸಮಾಲೋಚನೆ ನಿಮ್ಮ ಮೇಲೆ ಪ್ರಭಾವ ಬೀರಿದೆಯೇ?

ಅ) ಹೌದು ಆ) ಇಲ್ಲಾ

ಹೌದಾದರೆ ವಿವರಣೆ ನೀಡಿ

46. ಅನಾಮಿಕ ಅಮಲಿಗಳು ನಡೆಸು ಸಭೆಯಲ್ಲಿ ಪಾಲ್ಗೊಳ್ಳುವುದರ ಮೂಲಕ ಮದ್ಯ ವ್ಯಸನದಿಂದ ವಿಮುಕ್ತಿ ಹೊಂದಬಹುದೇ?

ಅ) ಹೌದು ಆ) ಇಲ್ಲಾ

# ಛಾಯಾಚಿತ್ರಗಳು



ಛಾಯಾಚಿತ್ರ – ೧– ವಿಮುಕ್ತಿ ಚಿಕಿತ್ಸೆಗಾಗಿ ಆಸ್ಪತ್ರೆಗೆ ದಾಖಲಾದ ಸೂಚನದಾರರ ಆರೋಗ್ಯ ಸ್ಥಿತಿಗತಿಯ ಬಗ್ಗೆ ಮನೋವೈದ್ಯರಿಂದ ಪರಿಶೀಲನೆ



ಛಾಯಾಚಿತ್ರ – ೧– ಆಪ್ತ ಸಮಾಲೋಚಕರಿಂದ ಸೂಚನದಾರರಿಗೆ ಆಪ್ತ ಸಮಾಲೋಚನೆ



ಭಾವಚಿತ್ರ –೩ – ಅನಾಮಿಕ ಅಮಲಿಗಳ ಗುಂಪಿನವರು ನಡೆಸುವ ಸಭೆಯಲ್ಲಿ ಪಾಲ್ಗೊಂಡವರು



ಭಾವಚಿತ್ರ – ೪ – ಮದ್ಯವ್ಯಸನ ವಿಮುಕ್ತಿ ಚಿಕಿತ್ಸೆಗಾಗಿ ಸಮುದಾಯ ಮದ್ಯವರ್ಜನ ಶಿಬಿರಗಳಲ್ಲಿ ಭಾಗವಹಿಸಿದ ಮದ್ಯವ್ಯಸನಿಗಳು



ಭಾವಚಿತ್ರ –೫ – ಮದ್ಯವ್ಯಸನದಿಂದ ವಿಮುಕ್ತಿ ಹೊಂದಿ ನವಜೀವನ ನಡೆಸುತ್ತಿರುವವರಿಗೆ ಅಸ್ಪತ್ರೆ ವತಿಯಿಂದ ಸನ್ಮಾನ ಕಾರ್ಯಕ್ರಮ

